ಬೇಕಾದ ಸ್ಥಳದಲ್ಲಿ ಇರಿಸಬಲ್ಲ, ಎಂತಹ ಜಟ್ಟಿಗಳನ್ನು ಸುಮ್ಮನೆ ಕುಳಿತಿದ್ದೇ ಪರಾಭವಗೊಳಿಸಬಲ್ಲ, ವಿಧರ್ಮೀಯರನ್ನೂ ತತ್ತ್ವಾರ್ಥಗರ್ಭಿತ ಅಪೂರ್ವ ಮಾತುಗಾರಿಕೆಯಿಂದ ಕ್ಷಣಮಾತ್ರದಲ್ಲೇ ಪ್ರಭಾವಿತರನ್ನಾಗಿಸಬಲ್ಲ, ಅನ್ಯಾದೃಶ ಯೋಗಶಕ್ತಿ ಅವರದ್ದು. ಶ್ರೀರಾಘವೇಂದ್ರ ಸ್ವಾಮಿಗಳು ತಮ್ಮ ಪ್ರಾತಃಸಂಕಲ್ಪಗದ್ಯದಲ್ಲಿ ವರ್ಣಿಸಿರುವಂತೆ ಶ್ರೀಮಧ್ವಾಚಾರ್ಯರು ಸಂಸಿದ್ಧಸಪ್ತಕೋಟಿಮಹಾಮಂತ್ರರಾದ ಯೋಗಿರಾಜರು.

ಅವರ ಕೃತಿಗಳು ಹಾಗೂ ಅವರ ಮೇಲೆ ರಚಿತವಾಗಿರುವ ಕೃತಿಗಳಿಂದ ತಿಳಿದುಬರುವಂತೆ ಅವರು ಅನುಪಮವಿದ್ವಾಂಸರು, ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡ ದಾರ್ಶನಿಕರು, ಸರಸಕವಿಗಳು, ವೇದದ್ರಷ್ಟಾರಋಷಿಗಳು, ವೇದಪ್ರತಿಪಾದ್ಯರಾದ ತತ್ತ್ವೋಪದೇಶಕ ಗುರುಗಳು, ಅದ್ವಿತೀಯವಾಗ್ಮಿಗಳು, ವೈವಿಧ್ಯಮಯಗ್ರಂಥಕಾರರು, ಅಪೂರ್ವ ಸಂಶೋಧಕರು, ಅಪ್ರತಿಮ ವಾದಕೋವಿದರು, ಅಪೂರ್ವ ಅನುಭಾವಿಗಳು, ತತ್ತ್ವಜ್ಞಾನದ ರಸಋಷಿಗಳು, ಸಕಲಭಾಷಾಕೋವಿದರಾದ ಭಾಷಿಗರು, ಅಪೂರ್ವಭಾಷಾಶಾಸ್ತ್ರಜ್ಞರು, ಮಹಾತಪಸ್ವಿಗಳು, ಅನುಪಮಗಾನಕೋವಿದರು, ಪುರಾತತ್ತ್ವಶಾಸ್ತ್ರಜ್ಞರು, ಮೀಮಾಂಸಾದಿ ಸಕಲಶಾಸ್ತ್ರವಿಶಾರದರು, ಸಮರ್ಥ ಆಡಳಿತಗಾರರು, ಅಸಾಮಾನ್ಯ ಸಂಘಟನಕಾರರು ಮತ್ತು ವಿಶಾಲ ಹೃದಯದ ಸಮಾಜಸುಧಾರಕರು. ಅವರು ನಿಜವಾದ ಅರ್ಥದಲ್ಲಿ ಸರ್ವಜ್ಞರು, ಸಕಲಕಲಾಕೋವಿದರು ಆಗಿದ್ದ ಮಹಾನುಭಾವರು. ದ್ವಾತ್ರಿಂಶಲ್ಲಕ್ಷಣಭರಿತವಾದ ಅವರ ಆಕೃತಿ ಕಲಿಯುಗದ ಏಕೈಕ ದಾಖಲೆ. ಐವತ್ತು ಟನ್ನುಗಳ ಮೇಲಿನ ಭಾರದ ಬೃಹತ್ತಾದ ಶಿಲೆಯನ್ನು ಒಂದೇ ಕೈಯಿಂದ ಭದ್ರಾನದಿಯ ಪ್ರವಾಹಮಧ್ಯದಲ್ಲಿ ಇರಿಸಿದ ಅವರ ದೈಹಿಕಸಾಮರ್ಥ್ಯ ಊಹಾತೀತವಾದದ್ದು. ಶ್ರುತಿಪ್ರೋಕ್ತವಾದ ಶ್ರೀವಾಯುದೇವರ ತೃತೀಯಾವತಾರರೆನ್ನಿಸಿದ್ದು ಅವರ ಮತ್ತೊಂದು ಅನನ್ಯ ಹಿರಿಮೆ.

ಅವರ ಗ್ರಂಥರಾಶಿಯೂ ವೈವಿಧ್ಯಮಯವಾದದ್ದು. ಆರಂಭದ ತತ್ತ್ವಜಿಜ್ಞಾಸುಗಳನ್ನು ಆಳವಾದ ಚಿಂತನೆಗೆ ಅಣಿಗೊಳಿಸಲು ಪ್ರಮಾಣಲಕ್ಷಣ, ಕಥಾಲಕ್ಷಣ, ತತ್ತ್ವಸಂಖ್ಯಾನ, ತತ್ತ್ವವಿವೇಕ, ಉಪಾಧಿಖಂಡನ, ಮಾಯಾವಾದಖಂಡನ, ಪ್ರಪಂಚಮಿಥ್ಯಾತ್ವಾನುಮಾನ-ಖಂಡನ, ತತ್ತ್ವೋದ್ಯೋತ, ವಿಷ್ಣುತತ್ತ್ವವಿನಿರ್ಣಯ ಮತ್ತು ಕರ್ಮನಿರ್ಣಯ ಎಂಬ ದಶಪ್ರಕರಣಗಳು, ವೇದರಹಸ್ಯವೆಂದು ಮಾನ್ಯವಾದ ಉಪನಿಷತ್ತುಗಳ ರಹಸ್ಯವನ್ನು ಅನಾವರಣಗೊಳಿಸುವ (ಈಶ, ಕೇನ, ಕಠ, ಷಟ್ಪ್ರಶ್ನ, ಮುಂಡಕ, ಮಾಂಡೂಕ, ತೈತ್ತಿರೀಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಎಂಬ) ದಶೋಪನಿಷತ್ತುಗಳ ಭಾಷ್ಯಗಳು, ಅತ್ಯುನ್ನತಶಾಸ್ತ್ರಕೃತಿಯಾದ ಬ್ರಹ್ಮಸೂತ್ರಗಳ ಮೇಲೆ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ ಮತ್ತು ನ್ಯಾಯವಿವರಣ ಎಂಬ ನಾಲ್ಕು ಕೃತಿಗಳು, ಪುರಾಣಪ್ರಸ್ಥಾನದ ಮೇಲಿನ ಭಾಷ್ಯರೂಪವಾಗಿ ಶ್ರೀಮದ್ಭಾಗವತ ಮಹಾಪುರಾಣದ ಮೇಲೆ ರಚಿತವಾಗಿರುವ ಭಾಗವತತಾತ್ಪರ್ಯನಿರ್ಣಯ, ವೇದಗಳಿಗಿಂತ ಮಿಗಿಲೆನ್ನಿಸಿದ ಮಹಾಭಾರತದ ಮೇಲೆ ಮಹಾಭಾರತತಾತ್ಪರ್ಯನಿರ್ಣಯವೆಂಬ ಅನುಪಮ ಸಂಶೋಧನವಿಮರ್ಶನ ಕೃತಿ ಹಾಗೂ

ಅದರ ಸಾರಸಂಗ್ರಹರೂಪವಾದ ಚಿತ್ರಕಾವ್ಯ ಯಮಕಭಾರತ, ಮಹಾಭಾರತಪಾರಿಜಾತದ ಸಕಲತತ್ತ್ವಗಳ ಮಧುವಾದ ಭಗವದ್ಗೀತೆಯ ಮೇಲೆ ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಎಂಬ ಎರಡು ಕೃತಿಗಳು, ಅಪೌರುಷೇಯ ವೇದಗಳಲ್ಲಿ ಪ್ರಥಮಗಣ್ಯವಾದ ಋಗ್ವೇದದ ಮೇಲೆ ಅಧ್ಯಾತ್ಮಾದಿ ಅರ್ಥತ್ರಯಗಳನ್ನು ವಿವೇಚಿಸುವ ಋಗ್ಭಾಷ್ಯ, ತತ್ತ್ವಜ್ಞಾನದ ಸಾಧನೆ ಮತ್ತು ಅನುಷ್ಠಾನಕ್ಕೆ ನೆರವಾಗುವ ತತ್ತ್ವಗಳನ್ನು ನಿರೂಪಿಸುವ ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀನಿರ್ಣಯ, ಪ್ರಣವಕಲ್ಪ, ತಂತ್ರಸಾರಸಂಗ್ರಹ ಎಂಬ ಆಚಾರಗ್ರಂಥಗಳು ಮತ್ತು ಕೊನೆಯದಾಗಿ ತಾವು ಪ್ರತಿಪಾದಿಸಿದ ಸಕಲತತ್ತ್ವಗಳನ್ನು ಅನುಸಂಧಾನಕ್ಕೆ ತಂದುಕೊಂಡು ಪರತತ್ತ್ವವಾದ ಭಗವಂತನನ್ನು ಪರಿಪರಿಯಾಗಿ ಸ್ತುತಿಸಲು ಅನುವು ಮಾಡಿಕೊಡುವ ದ್ವಾದಶಸ್ತೋತ್ರ ಮತ್ತು ನಖಸ್ತುತಿ (ಮತ್ತು ಕಂದುಕಸ್ತುತಿ) ಎಂಬ ಸ್ತೋತ್ರರತ್ನಗಳು – ಇವಿಷ್ಟು ಸರ್ವಮೂಲವೆಂದು ಪರಂಪರೆ ಕಾಪಾಡಿಕೊಂಡುಬಂದಿರುವ ಅವರ ಅಮೌಲ್ಯಕೃತಿಗಳು. ಸಕಲ ಮೂಲಗ್ರಂಥಗಳನ್ನು ನೀಡಿದ ಹಿರಿಮೆ ವೇದವ್ಯಾಸರದಾದರೆ ಸರ್ವಮೂಲಗ್ರಂಥಗಳನ್ನು ನೀಡಿದ ಹಿರಿಮೆ ಅಭಿನವವೇದವ್ಯಾಸರೆನ್ನಿಸಿದ ಶ್ರೀಮನ್ಮಧ್ವಾಚಾರ್ಯರದಾಗಿದೆ.

ಸರಳತೆ, ಸ್ಪಷ್ಟತೆ, ಗಾಂಭೀರ್ಯ, ಅಡಕನಿರೂಪಣೆ, ಪ್ರಮಾಣೋದಾಹರಣ ಹಾಗೂ ಯುಕ್ತಿವೈಭವಗಳು ಅವರ ಕೃತಿಗಳ ವಿಶಿಷ್ಟಲಕ್ಷಣಗಳು. ಜಗತ್ತಿನ ಬೇರಾವ ಗ್ರಂಥಕಾರರ ಕೃತಿಗಳಲ್ಲೂ ಕಾಣಸಿಗದ ನಿರಂತರ ಪ್ರಮಾಣೋದಾಹರಣೆ ಅವರ ಗ್ರಂಥಗಳ ಅಸಾಮಾನ್ಯ ಹಿರಿಮೆ. ಶಬ್ದವಿನ್ಯಾಸದಲ್ಲಿ ವಾಮನನಾಗಿದ್ದು, ಅರ್ಥವೈಭವದಲ್ಲಿ ತ್ರಿವಿಕ್ರಮನಾಗಿರುವುದು ಅವರ ಎಲ್ಲ ಬರವಣಿಗೆಯ ಅಸಾಧಾರಣಲಕ್ಷಣ.

## ಶ್ರೀಮಧ್ವಾಚಾರ್ಯರ ಕೃತಿಗಳು (ಸರ್ವಮೂಲಗ್ರಂಥಗಳು)

**ಗೀತಾಪ್ರಸ್ಥಾನಗ್ರಂಥಗಳು :**

ಶ್ರೀಮದ್ಭಗವದ್ಗೀತಾಭಾಷ್ಯ
ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯ

**ಸೂತ್ರಪ್ರಸ್ಥಾನಗ್ರಂಥಗಳು :**

ಶ್ರೀಮದ್ಬ್ರಹ್ಮಸೂತ್ರಭಾಷ್ಯ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ
ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣ

**ಉಪನಿಷತ್ಪ್ರಸ್ಥಾನಗ್ರಂಥಗಳು :**

ಐತರೇಯೋಪನಿಷದ್ಭಾಷ್ಯ
ಛಾಂದೋಗ್ಯೋಪನಿಷದ್ಭಾಷ್ಯ
ಬೃಹದಾರಣ್ಯಕೋಪನಿಷದ್ಭಾಷ್ಯ
ಈಶಾವಾಸ್ಯೋಪನಿಷದ್ಭಾಷ್ಯ

ತಲವಕಾರೋಪನಿಷದ್ಭಾಷ್ಯ ಷಟ್ಪ್ರಶ್ನೋಪನಿಷದ್ಭಾಷ್ಯ
ಕಾಠಕೋಪನಿಷದ್ಭಾಷ್ಯ ಆಥರ್ವಣೋಪನಿಷದ್ಭಾಷ್ಯ
ಮಾಂಡೂಕೋಪನಿಷದ್ಭಾಷ್ಯ ತೈತ್ತಿರೀಯೋಪನಿಷದ್ಭಾಷ್ಯ

ಶ್ರುತಿಪ್ರಸ್ಥಾನಗ್ರಂಥ :
ಋಗ್ಭಾಷ್ಯ

ಇತಿಹಾಸಪ್ರಸ್ಥಾನಗ್ರಂಥಗಳು :
ಮಹಾಭಾರತತಾತ್ಪರ್ಯನಿರ್ಣಯ ಯಮಕಭಾರತ

ಪುರಾಣಪ್ರಸ್ಥಾನಗ್ರಂಥ :
ಭಾಗವತತಾತ್ಪರ್ಯನಿರ್ಣಯ

ಪ್ರಕರಣಗ್ರಂಥಗಳು :
ತತ್ತ್ವಸಂಖ್ಯಾನ ತತ್ತ್ವವಿವೇಕ
ತತ್ತ್ವೋದ್ಯೋತ ವಿಷ್ಣುತತ್ತ್ವವಿನಿರ್ಣಯ
ಪ್ರಮಾಣಲಕ್ಷಣ ಕಥಾಲಕ್ಷಣ
ಉಪಾಧಿಖಂಡನ ಮಾಯಾವಾದಖಂಡನ
ಪ್ರಪಂಚಮಿಥ್ಯಾತ್ವಾನುಮಾನಖಂಡನ ಕರ್ಮನಿರ್ಣಯ

ಆಚಾರಗ್ರಂಥಗಳು :
ತಂತ್ರಸಾರಸಂಗ್ರಹ ಸದಾಚಾರಸ್ಮೃತಿ
ಜಯಂತೀನಿರ್ಣಯ ಕೃಷ್ಣಾಮೃತಮಹಾರ್ಣವ
ಪ್ರಣವಕಲ್ಪ

ಸ್ತೋತ್ರಕೃತಿಗಳು :
ನಖಸ್ತುತಿ ದ್ವಾದಶಸ್ತೋತ್ರ ಕಂದುಕಸ್ತುತಿ

*****

ಭಗವದ್ಗೀತೆ, ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳು ವೇದಾಂತದ ಮೂರು ಮಹತ್ತ್ವದ ಆಕರಗ್ರಂಥಗಳು. ಪ್ರಸ್ಥಾನತ್ರಯ ಎಂದೇ ಇವು ಪ್ರಸಿದ್ಧ. ಇವು ವೈದಿಕಸಿದ್ಧಾಂತನರಸಿಂಹನ ತ್ರಿನೇತ್ರಗಳು ಎನ್ನಬಹುದು.

# ಭಗವದ್ಗೀತೆ

ಭಗವದ್ಗೀತೆಯು ಜಗನ್ಮಾನ್ಯವಾದ ಅಮರ ಕೃತಿ; ಭಗವಂತನನ್ನು ಒಪ್ಪುವ ಎಲ್ಲರಿಗೂ ಅತ್ಯಂತಪ್ರಿಯವಾದಗ್ರಂಥ; ಗಾತ್ರದಲ್ಲಿ ಅದರಂತಹ ಪುಟ್ಟ ತಾತ್ತ್ವಿಕಕೃತಿ ಜಗತ್ತಿನಲ್ಲೇ

ಮತ್ತೊಂದಿಲ್ಲ; ಅದರಂತೆ ಹಿರಿಮೆಯಲ್ಲಿ ಅದನ್ನು ಮೀರುವ ಗ್ರಂಥ ಕೂಡ. ಅದನ್ನೊಳಗೊಂಡ ಮಹಾಭಾರತವೂ ಹಾಗೆಯೇ; ಅರ್ಥದಲ್ಲಿರಲಿ, ಗಾತ್ರದಲ್ಲೂ ಇಂದೂ ಅದೇ ವಿಶ್ವದ ಸಾರ್ವಭೌಮಗ್ರಂಥ; ಮಹಾಭಾರತವು ಮೂಲತಃ ಕೃಷ್ಣನ ಕಥೆಯಾದರೆ, ಗೀತೆ ಆ ಕೃಷ್ಣನ ಉಪದೇಶದ ಸಾರವಾಗಿದೆ; ಗೀತೆಯು ಮಹಾಭಾರತದ 'ದರ್ಶನ'ವಾದರೆ, ಮಹಾಭಾರತವು ಗೀತಾತತ್ತ್ವದ 'ನಿದರ್ಶನ'ವಾಗಿದೆ. ಗೀತೆಯು ವಾಮನನಾದರೆ ಮಹಾಭಾರತವು ಅದರ ತ್ರಿವಿಕ್ರಮರೂಪವಾಗಿದೆ; ವಾಮನತ್ರಿವಿಕ್ರಮ ಎರಡೂ ಮಹಾವಿಷ್ಣುವಿನ ಎರಡು ರೂಪಗಳೇ ಆಗಿವೆ. ಅರ್ಜುನನ ತಿಳಿವಿಗಾಗಿ ಯಾದವಕೃಷ್ಣ ಗೀತೆಯನ್ನು ಉಪದೇಶಿಸಿದರೆ, ಜಗತ್ತಿನ ತಿಳಿವಿಗಾಗಿ ವಾಸಿಷ್ಠಕೃಷ್ಣ ವೇದವ್ಯಾಸರು ಅದನ್ನು ಗ್ರಂಥರೂಪದಲ್ಲಿ ಒದಗಿಸಿದ್ದಾರೆ[೧]. ಅವುಗಳಲ್ಲಿ ಯಾವ ಒಂದನ್ನು ತಿಳಿಯದಿದ್ದರೂ, ಉಳಿದ ಮತ್ತೊಂದು ತಿಳಿಯುವುದಿಲ್ಲ. ಪದ್ಮನಾಭನ ಮುಖಪದ್ಮದಿಂದ ಹೊರಹೊಮ್ಮಿದ ಗೀತೆ, ವ್ಯಾಸರ ಮುಖಪದ್ಮದಿಂದ ಜಗತ್ತಿಗೆ ತಲುಪಿತು; ಅದರಲ್ಲಿ ತುಂಬಿರುವುದಂತು ಪ್ರಮೇಯಪದ್ಮಗಳೇ.

ಮಹಾಭಾರತವು ಎಲ್ಲ ಬಗೆಯಲ್ಲೂ ವಿಶಿಷ್ಟವಾದ ಕೃತಿ; ವಸ್ತುವಾಗಿ ಅದು ಇತಿಹಾಸ; ಕಾವ್ಯವಾಗಿ ಅದು ಕವಿಗಳ ಕಲ್ಪವೃಕ್ಷ; ತತ್ತ್ವದಿಂದಾಗಿ ವೇದೋತ್ತಮವಾದ ಮಹಾಶಾಸ್ತ್ರ. ಬರೆದ ವ್ಯಾಸರೂ ಅಷ್ಟೆ; ಅವರು ಬರೆಯದ್ದೇ[೨] ಇಲ್ಲ ; ಅವರ ಕೃತಿಗಳಲ್ಲಿ ಭಗವಂತನ ವಿಷಯವಿದ್ದರೆ, ಅವರಂತೂ ಸ್ವತಃ [೩]ಭಗವಂತನೇ ಆಗಿರುವರು. [೪]ಮಹಾಭಾರತವನ್ನು ಮೀರಿಸುವ ಏಕಮಾತ್ರ ಕೃತಿ 'ಬ್ರಹ್ಮಸೂತ್ರ'ವೂ ಅವರ ರಚನೆಯೇ; ಹದಿನೆಂಟು ಪುರಾಣಗಳನ್ನು ಬರೆದವರೂ ಅವರೇ; ಜಗತ್ತಿಗೆ ಜ್ಞಾನಕೊಟ್ಟ ಮಹನೀಯರಲ್ಲಿ ಅವರದೇ ಅಗ್ರಸ್ಥಾನ. ಕರ್ಮಮೀಮಾಂಸೆ ಬರೆದ ಜೈಮಿನಿ, ದೈವೀಮೀಮಾಂಸೆಯ ಬಹುಭಾಗ ಬರೆದ ಶೇಷಪೈಲರು ಅವರ ಶಿಷ್ಯರೇ ಆಗಿರುವರು. ಸಕಲಪುರಾಣಗಳನ್ನು ಪ್ರವಚನ ಮಾಡಿದ ಸೂತಪುರಾಣಿಕರು ಅವರ ಅನುಗ್ರಹದಿಂದ ಜನಿಸಿದವರು. ಮಹಾಭಾರತಪ್ರವರ್ತಕ ವೈಶಂಪಾಯನರು, ಅಥರ್ವಣವೇದಪ್ರವರ್ತಕ ಸುಮಂತು ಇವರ ಶಿಷ್ಯರು. ಅದರಂತೆ ಬಾದರಿ, ಕಾಶಕೃತ್ಸ್ನ, ಔಡುಲೋಮಿ, ಕಾರ್ಷ್ಣಾಜಿನಿ ಮೊದಲಾದ ಅನೇಕ ಪ್ರಮುಖ ಆಚಾರ್ಯರುಗಳು ಸಹ ಇವರ ಶಿಷ್ಯವರ್ಗಕ್ಕೆ ಸೇರಿದವರು.

ಕೃತಿಕಾರಮಾತ್ರವಲ್ಲದೆ, ವ್ಯಾಸರು ಮಹಾಭಾರತದ ಪ್ರಧಾನ ಪಾತ್ರಧಾರಿಯೂ ಆಗಿರುವರು; ಕುರು-ಪಾಂಡವರ ಜನಕರಾದ ಧೃತರಾಷ್ಟ್ರ, ಪಾಂಡುಗಳಿಗೆ ಜನ್ಮವಿತ್ತವರೇ

---

೧. ಏಕಾಂತೇ ಕಥಯನ್ನಪಿ ವ್ಯಾಸರೂಪೇಣ ತದೇವ ಲೋಕೇ ಪ್ರಕಾಶಯಿಷ್ಯತಿ ಹಿ। - ಗೀತಾತಾತ್ಪರ್ಯ

೨. ವ್ಯಾಸೋಚ್ಛಿಷ್ಟಂ ಜಗತ್ಸರ್ವಮ್ ।

೩. ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥ - ಮಹಾಭಾರತ

೪. ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥ - ಮಹಾಭಾರತ (೧/೧/೨೭೪)

ಇವರು; ಅಂದರೆ ಕೌರವ ಪಾಂಡವರು ಇವರ ಮೊಮ್ಮಕ್ಕಳು; ಮಹಾಭಾರತವು ತಾತ ಬರೆದ ಮೊಮ್ಮಕ್ಕಳ ಕಥೆ. ಮಹಾಭಾರತದ ಉದ್ದಕ್ಕೂ ಎಲ್ಲೆಡೆಯೂ ಕೃಷ್ಣನಂತೆ ಕಾಣಿಸಿಕೊಳ್ಳುವ ಮತ್ತೊಂದು ಪ್ರಮುಖ ಪಾತ್ರ ಇವರದು.

ಮಹಾಭಾರತವನ್ನು ಕೇಳದ ಜನರಿಲ್ಲ ; ಅದನ್ನು ಪೂರ್ಣವಾಗಿ[೧] ತಿಳಿದ ಜನರೂ ಇಲ್ಲ ; ಅದರಲ್ಲಿ ಬರುವ ಗೀತೆಯೂ ಹಾಗೆಯೇ; ಅವುಗಳನ್ನು ತಿಳಿದವರಿಗಿಂತ ಅವುಗಳ ಮೇಲೆ ಬರೆದವರೇ ಹೆಚ್ಚು.

ಮಹಾಭಾರತವು ಪಂಚಮವೇದ; ವ್ಯಾಸರು ಬರೆದದ್ದರಿಂದ 'ಕಾರ್ಷ್ಣವೇದ'; ಮಹತ್ತ್ವದಲ್ಲಿ ಇತರ ವೇದಗಳಿಗಿಂತ ಮಿಗಿಲಾದ ವೇದ; ಗೀತೆ ಅದರ ಉಪನಿಷತ್ತು; ಆದ್ದರಿಂದ ಅದು ಇತರ ಉಪನಿಷತ್ತುಗಳಿಗಿಂತ ಮಿಗಿಲಾದ ಉಪನಿಷತ್ತು.

ಮಹಾಭಾರತವು ಸಕಲಶಾಸ್ತ್ರಗಳ[೨] ಸಾರ. ಬಾಲಕೃಷ್ಣನ ಬಾಯಲ್ಲಿ ಯಶೋದೆಗೆ ಇಡೀ ಬ್ರಹ್ಮಾಂಡ ಕಂಡಿತು; ಪುಟ್ಟ ಗೀತೆಯ ಮಾತುಮಾತಿನಲ್ಲೂ ಆಸ್ತಿಕರಿಗೆ ಶಾಸ್ತ್ರಬ್ರಹ್ಮಾಂಡ ಕಾಣುವುದು.

ಅರ್ಥದ ದೃಷ್ಟಿಯಿಂದಲೂ ಮಹಾಭಾರತ ಜಗತ್ತಿನ ಅದ್ವಿತೀಯಗ್ರಂಥ; ಇದರ ಪ್ರತಿಶ್ಲೋಕದ ಪ್ರತಿಪದಕ್ಕೂ ಅತಿ ಕಡಿಮೆ ಎಂದರೂ[೩] ಹತ್ತು ಅರ್ಥಗಳು; ಅದರಲ್ಲಿ ಬರುವ ವಿಷ್ಣುಸಹಸ್ರನಾಮದ ಪ್ರತಿನಾಮಕ್ಕೂ ಕನಿಷ್ಠ ನೂರು ಅರ್ಥಗಳು. ಗೀತೆಯ ಅರ್ಥಗಳು ಹತ್ತೂ ಹೌದು, ನೂರೂ ಹೌದು; ಅವೆಲ್ಲ ಅಪೂರ್ವವೂ ಹೌದು; ಮಹಾಭಾರತದಲ್ಲಿ ಧರ್ಮಾದಿಸಕಲಪುರುಷಾರ್ಥಗಳ ವಿಚಾರವೂ ಬಂದಿದೆ; ಅದಕ್ಕೆಂದೇ ಅದು 'ಪುರುಷಾರ್ಥಗಳ[೪] ವಿಶ್ವಕೋಶ'ವಾಗಿದೆ.

ಮಹಾಭಾರತವು ಹದಿನೆಂಟು'ಪರ್ವ'ಗಳ 'ಪರ್ವತ'ವಾದರೆ ಗೀತೆಯು ಅದರ ಗೌರೀಶಂಕರ; ವಿಷ್ಣುಸಹಸ್ರನಾಮ ಅದರ ಅವಳಿಶಿಖರ; ಗೀತೆಯು ಯುದ್ಧಕ್ಕಿಂತ ಮುನ್ನ ಭೀಷ್ಮಪರ್ವದಲ್ಲಿ ಬಂದರೆ, ವಿಷ್ಣುಸಹಸ್ರನಾಮವು ಯುದ್ಧ ಮುಗಿದ ಮೇಲೆ ಭೀಷ್ಮರ ಬಾಯಿಂದ ಬಂದಿದೆ. ಅವುಗಳ ಅರಿವು ಎಂದರೆ ಅಜ್ಞಾನದ ಅಳಿವು; ಬಾಳಿನ ಉಳಿವು. ಶಾಸ್ತ್ರಗಳು ಸಾರಿವೆ - 'ವೇದ ಓದಬಲ್ಲವರಿಗೆ ಮಹಾಭಾರತ 'ವೇದಾರ್ಥ'ವಾದರೆ,

---

೧. ಬ್ರಹ್ಮಾऽಪಿ ತನ್ನ ಜಾನಾತಿ ಈಷತ್ ಸರ್ವೋऽಪಿ ಜಾನತಿ । – ಉಪನಾರದೀಯ

೨. ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ ।
ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ದ್ವಯಮ್ ॥ - ಮಹಾಕೌರ್ಮ

೩. ತ್ರಯೋऽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ।
ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್ ॥ - ಸ್ಕಂದಪುರಾಣ

೪. ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ । - ಮಹಾಭಾರತ

ಹಾಗಲ್ಲದವರಿಗೆ ಅದೇ 'ವೇದ'; ಎಲ್ಲರಿಗೂ ಅದರಿಂದಲೇ ತತ್ತ್ವಜ್ಞಾನದ[1] ಬೋಧ.

ಶ್ರೀಮನ್ಮಧ್ವಾಚಾರ್ಯರು ಎರಡಕ್ಕೂ ಅರ್ಥ ಬರೆದ ಮಹನೀಯರು; ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯನಿರ್ಣಯಗಳು 'ಗೀತಾರ್ಥ'ಗಳಾದರೆ ಮಹಾಭಾರತತಾತ್ಪರ್ಯನಿರ್ಣಯವು 'ಭಾರತಾರ್ಥ'ವಾಗಿದೆ. ಗೀತೆಯ ಮೇಲೆ ಎರಡು ಕೃತಿಗಳನ್ನು ಕೊಟ್ಟ ಏಕಮಾತ್ರ ಆಚಾರ್ಯರು ಅವರು; ಅವರು ಹೇಳುತ್ತಾರೆ : ''ಮಹಾಭಾರತವು ಪಾರಿಜಾತ; ಗೀತೆಯು ಅದರ ಮಧು''.

ಮತ್ತೊಂದು ಮಾತೂ ಉಂಟು; ''ಸಕಲ ಉಪನಿಷತ್ತುಗಳು ಗೋವುಗಳು; ಶ್ರೀಕೃಷ್ಣನೇ ಗೋವಳಿಗ; ಅರ್ಜುನನೇ ಕರು; ಗೀತಾಮೃತವೇ ಅವನು ಕರೆದ ಕ್ಷೀರ; ಸಜ್ಜನರು ಅದನ್ನು ಸವಿಯುವವರು''[2]. ದೇಹದ ಪೋಷಣೆಗೆ ಅವಶ್ಯವಾದ ಸಕಲ ಅಂಶಗಳೂ ಹಸುವಿನ ಹಾಲಿನಲ್ಲಿರುವಂತೆ ಜೀವದ ಪೋಷಣೆಗೆ ಅವಶ್ಯವಾದ ಸಕಲವಿಚಾರಗಳೂ ಗೀತೆಯಲ್ಲಿ ಬಂದಿವೆ ಎಂದು ಅದರ ಭಾವ. ಗೀತೆಯನ್ನು ಕೇಳಿದವನು ನರ(ನರಾಂಶ ಅರ್ಜುನ) ಹೇಳಿದವನು ನಾರಾಯಣ(ಶ್ರೀಕೃಷ್ಣ); ಅಂದರೆ ಇದು ಸಕಲ ನರರಿಗೂ ಭಗವಂತನಾದ ನಾರಾಯಣನ ಜ್ಞಾನ ಸಂದೇಶ.

ಮಹಾಭಾರತದಲ್ಲಿ ಮತ್ತೊಂದು ಮಾತೂ ಬಂದಿದೆ: ಗೀತಾ,ಗಂಗಾ, ಗಾಯತ್ರೀ ಮತ್ತು ಗೋವಿಂದ ಎಂಬ ನಾಲ್ಕನ್ನು ಹೃದಯದಲ್ಲಿ ಹೊತ್ತವನಿಗೆ ಮತ್ತೆ ಹುಟ್ಟುವ[3] ಭಯವಿಲ್ಲ.

ಭಗವದ್ಗೀತೆ ಒಟ್ಟು ಹದಿನೆಂಟು ಅಧ್ಯಾಯಗಳ ಪುಟ್ಟಗ್ರಂಥ; ಇದರಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ ೭೦೧; ಇದರಲ್ಲಿನ ಒಟ್ಟು ೧೮ ಅಧ್ಯಾಯಗಳ ಹೆಸರುಗಳು ಕ್ರಮವಾಗಿ ಹೀಗಿವೆ[4] (ಪ್ರಾಚೀನಪ್ರತಿಗಳಲ್ಲಿ ಅಧ್ಯಾಯಗಳ ನಾಮನಿರ್ದೇಶನ ಕಂಡುಬರುವುದಿಲ್ಲ) :

| | |
|---|---|
| ೧. ಅರ್ಜುನವಿಷಾದಯೋಗ(೪೭) | ೨. ಸಾಂಖ್ಯಯೋಗ (೭೨) |
| ೩. ಕರ್ಮಯೋಗ (೪೩) | ೪. ಜ್ಞಾನಯೋಗ (೪೨) |
| ೫. ಸಂನ್ಯಾಸಯೋಗ (೨೯) | ೬. ಆತ್ಮಸಂಯಮ(ಧ್ಯಾನ)ಯೋಗ (೪೭) |
| ೭. ಜ್ಞಾನವಿಜ್ಞಾನಯೋಗ (೩೦) | ೮. ಅಕ್ಷರಬ್ರಹ್ಮಯೋಗ (೨೮) |
| ೯. ರಾಜವಿದ್ಯಾರಾಜಗುಹ್ಯಯೋಗ (೩೪) | ೧೦. ವಿಭೂತಿಯೋಗ (೪೨) |

---

೧. ಭಾರತಂ ಬ್ರಾಹ್ಮಣಾದೀನಾಂ ವೇದಾರ್ಥಪರಿವಿತ್ತಯೇ।
ತ ಏವ ವೇದಾಸ್ತ್ವನ್ಯೇಷಾಂ ನರ್ತೇ ತತ್ ಕಸ್ಯಚಿತ್ ಸುಖಮ್॥ - ಇತಿ ಸ್ಕಾಂದೇ

೨. ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥

೩. ಗೀತಾ ಗಂಗಾ ಚ ಗಾಯತ್ರೀ ಗೋವಿಂದೇತಿ ಹೃದಿ ಸ್ಥಿತೇ।
ಚತುರ್ಗಕಾರಸಂಯುಕ್ತೇ ಪುನರ್ಜನ್ಮ ನ ವಿದ್ಯತೇ ॥ - ಮಹಾಭಾರತ (೬/೪೩/೩)

೪. ಕಂಸದಲ್ಲಿನ ಸಂಖ್ಯೆ ಆಯಾ ಅಧ್ಯಾಯದಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ.

೧೧. ವಿಶ್ವರೂಪದರ್ಶನಯೋಗ (೫೫) ೧೨. ಭಕ್ತಿಯೋಗ (೨೦)
೧೩. ಕ್ಷೇತ್ರಕ್ಷೇತ್ರಜ್ಞಯೋಗ (೩೫) ೧೪. ಗುಣತ್ರಯವಿಭಾಗಯೋಗ (೨೭)
೧೫. ಪುರುಷೋತ್ತಮಯೋಗ (೨೦) ೧೬. ದೈವಾಸುರಸಂಪದ್ವಿಭಾಗಯೋಗ (೨೪)
೧೭. ಶ್ರದ್ಧಾತ್ರಯವಿಭಾಗಯೋಗ (೨೮) ೧೮. ಮೋಕ್ಷಸನ್ಯಾಸಯೋಗ (೭೮)

ಇವುಗಳನ್ನು ಆರಾರು ಅಧ್ಯಾಯಗಳ ಒಟ್ಟು ಮೂರು ಭಾಗಗಳನ್ನಾಗಿ ವಿಂಗಡಿಸಿರುವರು; ಪ್ರಥಮಷಟ್ಕ (ಶ್ಲೋ. ೨೮೦)ದಲ್ಲಿ ತತ್ತ್ವಜ್ಞಾನದ ಉಪಾಯವಾದ ಕರ್ಮಯೋಗವೂ, ದ್ವಿತೀಯ(ಶ್ಲೋ. ೨೦೯)ಷಟ್ಕದಲ್ಲಿ ಮೋಕ್ಷಕ್ಕೆ ಸಾಧನವಾದ ತತ್ತ್ವಜ್ಞಾನದ ಸ್ವರೂಪವೂ, ತೃತೀಯ(ಶ್ಲೋ. ೨೧೨)ಷಟ್ಕದಲ್ಲಿ ಇವೆರಡರ ವಿವರಣೆಯೂ[೧] ಬಂದಿದೆ.

## ಗೀತಾಪ್ರಸ್ಥಾನಗ್ರಂಥಗಳು

ಗೀತಾತಾತ್ಪರ್ಯಭಾಷ್ಯಾಭ್ಯಾಮಾಭ್ಯಾಂ ವಿಶ್ವಂ ಪ್ರಕಾಶ್ಯತೇ ।
ಗೋಗಣೈರಪ್ರತೀಕಾರ್ಯೈರರ್ಕೇಂದುಭ್ಯಾಮಿವಾಧಿಕಮ್ ॥
- ಸುಮಧ್ವವಿಜಯ (೧೫/೭೫)

## ಗೀತಾಭಾಷ್ಯ

ಗೀತಾಭಾಷ್ಯ ಶ್ರೀಮದಾಚಾರ್ಯರ ಕೃತಿಗಳಲ್ಲಿ ಮೊದಲನೆಯದು. ಈ ಮಾತು ಅಣುಮಧ್ವಚರಿತ ಹಾಗು ಗ್ರಂಥಮಾಲಿಕಾಸ್ತೋತ್ರಗಳಲ್ಲಿ ಸ್ಪಷ್ಟವಾಗಿ ಬಂದಿದೆ :

ಗೀತಾಭಾಷ್ಯಂ ವಿಧಾಯಾದೌ ದೃಷ್ಟ್ವಾ ಚ ಬದರೀತಟೇ ।
ವೇದವ್ಯಾಸಸ್ಯ ಚಾದೇಶಾತ್ ಸೂತ್ರಭಾಷ್ಯಮಥಾಕರೋತ್
-ಅಣುಮಧ್ವಚರಿತ (ಶ್ಲೋ.೭)

ಗೀತಾಭಾಷ್ಯಂ ವಿಧಾಯಾದೌ ಪ್ರಥಮಂ ತುಷ್ಟಿದಂ ಹರೇಃ ।
-ಗ್ರಂಥಮಾಲಿಕಾಸ್ತೋತ್ರಮ್ (ಶ್ಲೋ. ೩)

ಸುಮಧ್ವವಿಜಯದ ವಿವರಗಳೂ ಇದಕ್ಕೆ ಸಂವಾದಿಯಾಗಿವೆ. (ಇದು ದಕ್ಷಿಣದಿಗ್ವಿಜಯವನ್ನು ಪೂರೈಸಿ ಉಡುಪಿಗೆ ಮರಳುತ್ತಲೇ ಅವರು ರಚಿಸಿದ ಕೃತಿ.) ಮನನ ಮಾಡಿದಷ್ಟೂ ಅಕ್ಷಯವೆನ್ನಿಸುವ ವಿಷಯಗಳಿಂದ ತುಂಬಿರುವ ಅಪೂರ್ವಕೃತಿ ಎಂಬ ಹಿರಿಮೆ ಇದರದ್ದು ಎಂಬ ಮಾತು ಸುಮಧ್ವವಿಜಯದಲ್ಲಿದೆ. ಇದು ಅವರ ಸಕಲಗ್ರಂಥಗಳಿಗೂ ಅಷ್ಟೇ ಸಮರ್ಪಕವಾಗಿ ಅನ್ವಯಿಸುವ ಹಿರಿಮೆ.

---

೧. ತತ್ರ ಪೂರ್ವಷಟ್ಕೇ ಜ್ಞಾನೋಪಾಯೋಕ್ತಿಃ । ದ್ವಿತೀಯಷಟ್ಕೇ ತತ್ಸಾಧ್ಯಜ್ಞಾನೋಕ್ತಿಃ । ತೃತೀಯಷಟ್ಕೇ ಪ್ರಾಗುಕ್ತಸ್ಯ ಪ್ರಪಂಚನಂ ಕ್ರಿಯತೇ ಇತಿ ವಿವೇಕಃ । - ಶ್ರೀರಾಘವೇಂದ್ರರ ಗೀತಾವಿವೃತಿ

ಆಚಾರ್ಯರು ಇದರ ಹಿಂದೆ ಒಂದು ಪ್ರತಿಯನ್ನು ಅಚ್ಯುತಪ್ರೇಕ್ಷರು ಹಾಗು ಜ್ಯೇಷ್ಠಯತಿಗಳಿಗೆ ನೀಡಿ, ಮೂಲಪ್ರತಿಯನ್ನು ಬದರಿಯಲ್ಲಿ ಶ್ರೀನಾರಾಯಣದೇವರಿಗೆ ಸಮರ್ಪಿಸಿದರು.
ಅದನ್ನು ಬಹುವಾಗಿ ಪ್ರಶಂಸಿಸಿದ ಶ್ರೀವೇದವ್ಯಾಸರು ಆರಂಭದಲ್ಲಿ ಒಂದು ತಿದ್ದುಪಡಿಯನ್ನು ಸೂಚಿಸಿದರಂತೆ:

ದೇವಂ ನಾರಾಯಣಂ ನತ್ವಾ ಸರ್ವದೋಷವಿವರ್ಜಿತಮ್ ।
ಪರಿಪೂರ್ಣಂ ಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ ॥

ಎಂಬ ಮೊದಲ ಶ್ಲೋಕದಲ್ಲಿ 'ಶಕ್ತಿತಃ' ಎಂದಿರುವಿರಿ; ಇದರ ಬದಲು 'ಲೇಶತಃ' ಎಂಬ ಪದವನ್ನು ಹಾಕಿರಿ. ಪೂರ್ಣಪ್ರಮತಿಗಳಾದ ನಿಮ್ಮ ಶಕ್ತಿ ಇಷ್ಟುಮಾತ್ರ ಎಂಬ ತಪ್ಪು ತಿಳುವಳಿಕೆ ಓದುಗರಿಗೆ ಬರದಿರಲಿ. ಆದಕ್ಕಾಗಿಯೇ ಈ ತಿದ್ದುಪಡಿ. ಈ ಮಾತು ಮಹಾಭಾರತದಲ್ಲಿ ಭೀಮನನ್ನು ಪ್ರಶಂಸಿಸುತ್ತ ನುಡಿದ ಶ್ರೀಕೃಷ್ಣನ ಮಾತಿನಂತಿದೆ:

ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।
ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥(ಉದ್ಯೋಗ ೭೭/೩)

ಗೀತಾಭಾಷ್ಯವು ಸಮಗ್ರ ಗೀತೆಗೆ ರಚಿತವಾಗಿರುವ ಭಾಷ್ಯ. ಆರಂಭದಲ್ಲಿ ಗೀತೆ ಮತ್ತು ಅದನ್ನೊಳಗೊಂಡ ಮಹಾಭಾರತದ ಮಹತ್ತ್ವವನ್ನು ಅನೇಕ ಆಧಾರಗಳನ್ನಿತ್ತು ನಿರೂಪಿಸಿರುವರು. ವಿಷ್ಣುಸಹಸ್ರನಾಮವೂ ಗೀತೆಯಷ್ಟೇ ಹಿರಿದಾದ ಕೃತಿ ಎಂಬ ಅಂಶವನ್ನು ಸಾರಿರುವರು. 'ಮಹಾಭಾರತವು ಪಾರಿಜಾತವಾದರೆ, ಗೀತೆ ಅದರ ಮಧು' ಎಂಬುದಾಗಿ ಅವರು ಗೀತೆಯನ್ನು ವರ್ಣಿಸಿರುವ ಪರಿ ಅನನ್ಯವಾದುದು. ಗೀತೆಗೆ ಭಾಷ್ಯ ಬರೆದ ಬೇರಾರೂ ಅದರ ಮಹತ್ತ್ವವನ್ನು ಇಷ್ಟು ಸ್ಫುಟವಾಗಿ ನಿರೂಪಿಸಿಲ್ಲ ಎಂಬುದನ್ನು ಗಮನಿಸಬೇಕು. ಅವತಾರಿಕೆಯಲ್ಲಿ ವ್ಯಾಸಾವತಾರದ ಹಿನ್ನೆಲೆ, ವೇದ ಓದುವ ಅವಕಾಶವಿಲ್ಲದ ಸ್ತ್ರೀಶೂದ್ರಾದಿಗಳಿಗೂ ಲೋಕೋಪಯಾಗಿಯಾದ ತತ್ತ್ವಜ್ಞಾನ ಲಭಿಸಲೆಂದು ಮಹಾಭಾರತದ ರಚನೆ ಎಂಬ ಅಂಶ, ಮಹಾಭಾರತವು 'ಸರ್ವವೇದಾದ್ಯರ್ಥೋಪಬೃಂಹಿತ'ವೂ, 'ತದ-ನುಕ್ತಕೇವಲೇಶ್ವರಜ್ಞಾನದೃಷ್ಟಾರ್ಥಯುಕ್ತ'ವೂ ಆದ ಮಹತ್ತರ ಕೃತಿ ಮೊದಲಾದ ವಿಷಯಗಳನ್ನು ತಿಳಿಸಿ, ಅನಂತರ ಅದರ ಸಮರ್ಥನೆಗೆಂದು ನಾರಾಯಣಾಷ್ಟಾಕ್ಷರಕಲ್ಪ, ಉಪನಾರದೀಯ, ನಾರದೀಯ, ಸ್ಕಾಂದ ಮೊದಲಾದ ಆಕರಗ್ರಂಥಗಳಿಂದ ಪ್ರಮಾಣವಚನಗಳನ್ನು ಉದಾಹರಿಸಿರುವರು.

ಅನಂತರ 'ಸರ್ವಭಾರತಾರ್ಥಸಂಗ್ರಹಾಂ ವಾಸುದೇವಾರ್ಜುನಸಂವಾದರೂಪಾಂ ಭಾರತಪಾರಿಜಾತಮಧುಭೂತಾಂ ಗೀತಾಮುಪಸಿಬಬಂಧ', ಎಂದು ಗೀತೆಯ ಮಹತ್ತ್ವವನ್ನು ಸಾರಿ ಮುಂದೆ ಎರಡನೆಯ ಅಧ್ಯಾಯದ 'ಅಶೋಚ್ಯಾನನ್ವಶೋಚಸ್ತ್ವಂ' ಎಂಬ ಶ್ಲೋಕದಿಂದ ಭಾಷ್ಯ ಪ್ರಾರಂಭಿಸಿರುವರು. ಗೀತೆಯ ಪ್ರತಿಶ್ಲೋಕಕ್ಕೂ ಆಚಾರ್ಯರು

ಭಾಷ್ಯ ರಚಿಸಿಲ್ಲ. ಆದರೆ ಪ್ರತಿಶ್ಲೋಕದ ಅರ್ಥವೂ ಬರುವಂತೆ ಭಾಷ್ಯ ರಚಿಸಿರುವರು. 'ಪ್ರಜ್ಞಾವಾದ', 'ವೇದವಾದ', 'ನಿರ್ವೇದ', 'ತ್ರೈಗುಣ್ಯವಿಷಯ' ಮೊದಲಾದ ಪದ-ಗಳಿಗೂ,'ಮಾ ಫಲೇಷು ಕದಾಚನ', 'ಸ್ಥಿತ್ವಾಽಸ್ಯಾಮಂತಕಾಲೇಽಪಿ', ' 'ತಸ್ಯ ಕಾರ್ಯಂ ನ ವಿದ್ಯತೇ', 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ', 'ವಾಸುದೇವಃ ಸರ್ವಂ', 'ಸರ್ವಧರ್ಮಾನ್ ಪರಿತ್ಯಜ್ಯ', 'ಪಂಡಿತಾಃ ಸಮದರ್ಶಿನಃ', 'ಸಮಬುದ್ಧಿರ್ವಿಶಿಷ್ಯತೇ', 'ಕ್ಷರಶ್ಚಾಕ್ಷರ ಏವ ಚ' ಮೊದಲಾದ ವಾಕ್ಯಗಳಿಗೆ ಅವರು ನೀಡಿರುವ ವಿವರಣೆ ಗೀತಾರ್ಥಚಿಂತನೆಗೆ ವಿನೂತನ ಆಯಾಮವನ್ನೇ ನೀಡಿದೆ. ಇವು ಮಾತ್ರವಲ್ಲದೆ ಪ್ರತಿಯೊಂದು ಪದವಾಕ್ಯಗಳಿಗೆ ಅವರು ನೀಡಿದ ವಿವರಣೆ ಗೀತಾರ್ಥಪ್ರಪಂಚಕ್ಕೆ ವಿನೂತನವಾದುದು. ಭಗವಂತನು ಸಾಕಾರನೇ ಹೊರತು ನಿರಾಕಾರನಲ್ಲ ಎಂಬುದಕ್ಕೆ ವಿಶ್ವರೂಪಾಧ್ಯಾಯಕ್ಕಿಂತಲೂ ಹೆಚ್ಚಿನ ಆಧಾರ ಬೇಕೆ? ಗೀತೆ ನಿಷೇಧಿಸಿರುವುದು ಅಮುಖ್ಯ ಫಲಗಳಾದ ಸ್ವರ್ಗಾದಿಗಳನ್ನೇ ಹೊರತು ಮುಖ್ಯ ಫಲಗಳಾದ ಜ್ಞಾನ, ಭಕ್ತ್ಯಾದಿಗಳನ್ನಲ್ಲ; ಕರ್ಮಾಚರಣೆ ಅಜ್ಞಾನಿಗಳಿಗೆ ಹೇಗೋ ಜ್ಞಾನಿಗಳಿಗೂ ಹಾಗೆಯೇ ಅವಶ್ಯ ಕರ್ತವ್ಯ. ಭಗವತ್ಪ್ರೀತಿಗೆಂದು ನಿಷ್ಕಾಮಕರ್ಮದ ಅನುಷ್ಠಾನ ಅಜ್ಞಾನಿಗಳಿಗೆ ಅಪರೋಕ್ಷಜ್ಞಾನಕ್ಕೂ ಜ್ಞಾನಿಗಳಿಗೆ ಮೋಕ್ಷದಲ್ಲಿ ಆನಂದಾತಿಶಯಕ್ಕೂ ಸಾಧನ. ದ್ವೇಷಾದಿಗಳಿಂದ ಮುಕ್ತಿಯಿಲ್ಲ; ಭಕ್ತಿಯೇ ಮುಕ್ತಿಗೆ ಸಾಧನ ಮೊದಲಾದ ವಿಚಾರಗಳನ್ನು ಸಾಧಾರವಾಗಿ ಪ್ರತಿಪಾದಿಸಿರುವರು.

ವಿಭೂತಿಯೋಗದಲ್ಲಿ ಬಂದಿರುವ ವಿಚಾರಗಳು ಮೇಲ್ನೋಟಕ್ಕೆ ಸರಳ; ಆದರೆ ಅಲ್ಲಿ ವಿಚಾರ ಮಾಡಿದರೆ ಸಾಕಷ್ಟು ಗೊಂದಲಕ್ಕೆ ಅವಕಾಶವಿದೆ. ಆಯುಧಗಳಲ್ಲಿ ಸುದರ್ಶನದ ಬದಲು ವಜ್ರ; ಪಾಂಡವರಲ್ಲಿ ಭೀಮಸೇನನ ಬದಲು ಅರ್ಜುನ; ಯಜ್ಞಗಳಲ್ಲಿ ಜ್ಞಾನಯಜ್ಞದ ಬದಲು ಜಪಯಜ್ಞ; ವೇದಗಳಲ್ಲಿ ಋಗ್ವೇದದ ಬದಲು ಸಾಮವೇದ ಇವೆಲ್ಲ ಹೇಗೆ? ನಕ್ಷತ್ರವೇ ಅಲ್ಲದ ಚಂದ್ರ ನಕ್ಷತ್ರಗಳಲ್ಲಿ ಶ್ರೇಷ್ಠ; ಜಲಚರವೇ ಅಲ್ಲದ ವರುಣ ಜಲಚರಗಳಲ್ಲಿ ಶ್ರೇಷ್ಠ ಹೇಗೆ? ಈ ಬಗ್ಗೆ ಇತರ ಯಾವ ಭಾಷ್ಯದಲ್ಲೂ ಉತ್ತರವಿಲ್ಲ; ಆದರೆ ಮಧ್ವಭಾಷ್ಯದಲ್ಲಿ ಚೆಲ್ಲುವ ಬೆಳಕು ಅತ್ಯಂತ ಅಪೂರ್ವ.

ಗೀತೆಯ ವಿಭೂತಿಯೋಗದಲ್ಲಿ ನಾಲ್ಕುತೆರನಾದ ವಿಭೂತಿಗಳು ನಿರೂಪಿತವಾಗಿವೆ. 'ಮುನೀನಾಮಪ್ಯಹಂ ವ್ಯಾಸಃ', 'ವೃಷ್ಣೀನಾಂ ವಾಸುದೇವೋಽಸ್ಮಿ'. 'ಸಿದ್ಧಾನಾಂ ಕಪಿಲೋ ಮುನಿಃ', 'ರಾಮಃ ಶಸ್ತ್ರಭೃತಾಮಹಂ' ಇವೆಲ್ಲ ಸಾಕ್ಷಾದ್ವಿಭೂತಿಗಳು; 'ಇಂದ್ರಿಯಗಳಲ್ಲಿ ಮನಸ್ಸು', 'ರುದ್ರರಲ್ಲಿ ಶಂಕರ', 'ಆನೆಗಳಲ್ಲಿ ಐರಾವತ', 'ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು' ಮೊದಲಾದವುಗಳು ಸಜಾತೀಯಶ್ರೈಷ್ಠ್ಯಪ್ರದವಿಭೂತಿಗಳು; 'ಪಾಂಡವರಲ್ಲಿ ಅರ್ಜುನ ಭೀಮನ ಅನಂತರ'. 'ಆಯುಧಗಳಲ್ಲಿ ವಜ್ರಾಯುಧ ಸುದರ್ಶನದ ಅನಂತರ', 'ಯಜ್ಞಗಳಲ್ಲಿ ಜಪಯಜ್ಞ ಜ್ಞಾನಯಜ್ಞದ ಅನಂತರ' ಇವೆಲ್ಲ ಸಜಾತೀಯಏಕದೇಶ ಶ್ರೈಷ್ಠ್ಯಪ್ರದವಿಭೂತಿಗಳು. 'ನಕ್ಷತ್ರಗಳಲ್ಲಿ ಚಂದ್ರ', 'ಜಲಚರಗಳಲ್ಲಿ ವರುಣ' ಎಂಬವು ವಿಜಾತೀಯಶ್ರೈಷ್ಠ್ಯಪ್ರದ ವಿಭೂತಿಗಳು; ಇದು ಅವರು ನೀಡಿರುವ ವಿವರಣೆ.

ಹನ್ನೆರಡನೆಯ ಅಧ್ಯಾಯದಲ್ಲಿ;'ನಿನ್ನ ಉಪಾಸನೆ ಶ್ರೇಷ್ಠವೋ' 'ಅವ್ಯಕ್ತೋಪಾಸನೆ ಶ್ರೇಷ್ಠವೋ' ಎಂಬ ಅರ್ಜುನನ ಪ್ರಶ್ನೆಗೆ 'ಸಗುಣೋಪಾಸನೆ ಶ್ರೇಷ್ಠವೋ? ನಿರ್ಗುಣೋಪಾಸನೆ ಶ್ರೇಷ್ಠವೋ' ಎಂಬುದಾಗಿ ಅದ್ವೈತದ ಭಾಷ್ಯದ ವಿವರಣೆಯಾಗಿದೆ. ಆದರೆ ಶ್ರೀಮದಾಚಾರ್ಯರು 'ನಾರಾಯಣೋಪಾಸನೆ ಶ್ರೇಷ್ಠವೋ, ಮಹಾಲಕ್ಷ್ಮಿಯ ಉಪಾಸನೆ ಶ್ರೇಷ್ಠವೋ? ಇಬ್ಬರ ಉಪಾಸನೆಯಿಂದಲೂ ಮೋಕ್ಷ ದೊರೆಯುವುದಲ್ಲವೇ!' ಎಂಬುದು ಅರ್ಜುನನ ಆಶಯ ಎಂದು ಸಾಧಾರವಾಗಿ ವಿವೇಚಿಸಿ ನಾರಾಯಣನ ಉಪಾಸನೆಯೇ ಶ್ರೇಷ್ಠ ಎಂಬುದು ಶ್ರೀಕೃಷ್ಣನ ಸಂದೇಶ ಎಂದು ಸಾರಿರುವರು.

'ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ' ಎಂಬುದನ್ನು ಕಾಕುಸ್ವರವಾಗಿ ಓದಿಕೊಳ್ಳಬೇಕು ಎಂಬ ಅಂಶ, ಅದರಲ್ಲಿನ 'ತು' ಎಂಬುದರ ಸ್ವಾರಸ್ಯ, 'ಗತಾಸೂನಗತಾಸೂಂಶ್ಚ' ಎಂಬಲ್ಲಿ 'ಚ' ಎಂಬುದನ್ನು 'ಇವ' ಎಂಬ ಅರ್ಥದಲ್ಲಿ ನೋಡಬೇಕು ಎಂಬ ವಿವರಣೆ ಹೀಗೆ ಇಲ್ಲಿಯ ಒಂದೊಂದೂ ಅಪೂರ್ವಾರ್ಥದ ಗಣಿಯೇ ಆಗಿದೆ.

## ಗೀತಾತಾತ್ಪರ್ಯನಿರ್ಣಯ

ಗೀತಾತಾತ್ಪರ್ಯ ಅಥವಾ ಗೀತಾತಾತ್ಪರ್ಯನಿರ್ಣಯ ಭಗವದ್ಗೀತೆಯ ಮೇಲೆ ಶ್ರೀಮದಾಚಾರ್ಯರು ರಚಿಸಿರುವ ಮತ್ತೊಂದು ಗ್ರಂಥ (ಗ್ರಂಥಸಂಖ್ಯೆ ೧೩೦೦) ಗೀತಾಭಾಷ್ಯ ರಚಿಸಿದಾಗ ಅವರ ವಯಸ್ಸು ಹದಿನಾರರ ಆಸುಪಾಸಿನದಷ್ಟೇ! ಗೀತಾತಾತ್ಪರ್ಯನಿರ್ಣಯ ಅನಂತರದ ಕೃತಿ. ಎರಡರಲ್ಲೂ ಕಾಣುವ ಅವರ ಅತ್ಯಂತ ಖಚಿತವೂ, ಪೂರಕವೂ ಆದ ಪ್ರಾಮಾಣಿಕ ವಿಚಾರಸರಣಿ ಅವರ ಪೂರ್ಣಪ್ರಜ್ಞತ್ವಕ್ಕೆ ಮತ್ತೊಂದು ರೀತಿಯಲ್ಲಿ ದ್ಯೋತಕ.

ಶ್ರೀಜಯತೀರ್ಥರು ಇದರ ಬಗ್ಗೆ ಹೀಗೆ ನುಡಿದಿರುವರು :

'ವ್ಯಾಖ್ಯಾತತ್ವೇಽಪಿ ಗೀತಾಯಾಸ್ತದರ್ಥಸ್ಯ ಶಿಷ್ಯಾಣಾಂ ಬುದ್ಧ್ಯಾರೋಹಾರ್ಥಂ ಶಬ್ದಾನು-
ಕರಣಾದ್ಯಂತರೇಣ ಪುನಸ್ತಾತ್ಪರ್ಯಮೇವೋಚ್ಯತೇ' - ನ್ಯಾಯದೀಪಿಕಾ

ಬ್ರಹ್ಮಸೂತ್ರಭಾಷ್ಯ ರಚಿಸಿದ ಆಚಾರ್ಯರು ಅನುವ್ಯಾಖ್ಯಾನವನ್ನು ರಚಿಸುತ್ತ ಅದಕ್ಕೆ ಕೊಟ್ಟಿರುವ ಕಾರಣ ಇದರ ರಚನೆಗೂ ಅನ್ವಯಿಸುತ್ತದೆ. ಸೂತ್ರಭಾಷ್ಯದ ಅರ್ಥದ ಸ್ಪಷ್ಟೀಕರಣಕ್ಕೆ ಗೀತಾತಾತ್ಪರ್ಯ ರಚಿತವಾಗಿದೆ ಎಂದು ಭಾವಿಸಬಹುದು. ಅವರು ಇದರ ಆರಂಭದಲ್ಲಿ ಒಂದೇ ಮಾತಿನಲ್ಲಿ ಗೀತೆಯ ತಾತ್ಪರ್ಯವನ್ನು ಸಂಗ್ರಹಿಸಿರುವ ರೀತಿ ಅನ್ಯಾದೃಶವಾದುದು:

''ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ ಧರ್ಮಃ, ತದ್ವಿರುದ್ಧಃ ಸರ್ವೋಽ-
ಪ್ಯಧರ್ಮಃ, ಭಗವದಧೀನತ್ವಾತ್ ಸರ್ವಸ್ಯ'' ಇತಿ ಬೋಧಯತಿ ಭಗವಾನ್ ನಾರಾಯಣಃ ।

'ತಮ್ಮ ಪಾಲಿಗೆ ವಿಹಿತವಾದ ಕರ್ತವ್ಯಕರ್ಮದಿಂದ ಭಕ್ತಿಯಿಂದ ಭಗವಂತನನ್ನು ಆರಾಧಿಸುವುದೇ ಸಕಲರ ಪರಮಧರ್ಮ. ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮ. ಸರ್ವವೂ ಭಗವದಧೀನವಾದುದರಿಂದ '– ಎಂಬುದಾಗಿ ಭಗವಂತನಾದ ನಾರಾಯಣನು ಬೋಧಿಸಿರುವನು.

ಅನಂತರ ಕ್ಷತ್ರಿಯರಿಗೆ ಯುದ್ಧವು ಸ್ವಧರ್ಮ; ಸ್ವಧರ್ಮವನ್ನು ಆಚರಿಸುತ್ತಲೇ ಭಗವಂತನನ್ನು ಆರಾಧಿಸುವುದು ಎಲ್ಲರ ಕರ್ತವ್ಯ; ಮಿಕ್ಕಿದ್ದು ತ್ಯಾಜ್ಯ. 'ವಿಷ್ಣುಭಕ್ತಿಯೇ ಸರ್ವಸಾಧನಗಳಲ್ಲೂ ಮಿಗಿಲು – ಪರೋಕ್ಷಜ್ಞಾನಿ ಅಪರೋಕ್ಷಜ್ಞಾನಿ ಎಂಬ ಇಬ್ಬರಿಗೂ ಮೋಕ್ಷವು ಭಗವದಧೀನ, ಸರ್ವರಿಗೂ ಭಗವದಾರಾಧನರೂಪ ಸ್ವಧರ್ಮವು ವಿಹಿತ, ನಿಷಿದ್ಧಕರ್ಮಗಳು ತ್ಯಾಜ್ಯ, ಬ್ರಹ್ಮಜ್ಞಾನಿಗೂ ಸ್ವಧರ್ಮವು ವಿಹಿತ, ಅರ್ಜುನ ಉತ್ತಮಾಧಿಕಾರಿ ಹಾಗೂ ಅಪರೋಕ್ಷಜ್ಞಾನಿ, ಭಗವಂತನು ಸರ್ವರಿಂದಲೂ ಭಿನ್ನ, ಸಕಲವೂ ಅವನ ಅಧೀನ, ಅವನು ಯಾರಿಗೂ ಅಧೀನನಲ್ಲ; ಅವನು ಸ್ವತಂತ್ರ, ಸರ್ವೋತ್ತಮ ಹಾಗೂ ಸರ್ವಗುಣಪೂರ್ಣ, ಸರ್ವಶಾಸ್ತ್ರಗಳೂ ಭಗವತ್ಪರ, ಬ್ರಹ್ಮಜ್ಞಾನದಿಂದಲೇ ಮೋಕ್ಷ ಇತ್ಯಾದಿ ಪ್ರಮೇಯಗಳು ಭಗವದ್ಗೀತೆಯ ವಚನಗಳಿಂದಲೇ ಸ್ಪಷ್ಟಪಡುತ್ತವೆ ಎಂಬುದಾಗಿ ತೋರಿಸಿರುವರು.

ಗೀತಾತಾತ್ಪರ್ಯದ ಮುಂದಿನ ಭಾಗದ ವಿಶೇಷಾಂಶಗಳನ್ನು ಹೀಗೆ ಸಂಗ್ರಹಿಸಬಹುದು.

೧) ಗೀತಾಭಾಷ್ಯದಲ್ಲಿನ ವಿವರಗಳನ್ನು ಪ್ರಮಾಣಾಂತರಗಳಿಂದ ಸ್ಥಿರಪಡಿಸುವುದು.

೨) ಅಲ್ಲಿ ಹೇಳದೆ ಇದ್ದ ಅರ್ಥವಿಶೇಷವನ್ನು ತೋರಿಸುವುದು ಹಾಗೂ ಆ ಮೂಲಕ ಮಹಾಭಾರತಕ್ಕೆ ಹತ್ತು ಅರ್ಥಗಳಾಗಿರುವುದರಿಂದ, ಅದರಲ್ಲಿ ಬರುವ ಗೀತೆಗೆ ಹತ್ತು ಅರ್ಥಗಳು ಎಂಬ ಮಾತನ್ನು ಈ ರೀತಿಯ ವಿಶೇಷಾರ್ಥಕಥನದಿಂದ ಸ್ಫುಟಪಡಿಸುವುದು. ಇದಕ್ಕೆ ನಿದರ್ಶನವಾಗಿ ೨/೧೧, ೨/೧೬, ೨/೪೭, ೩/೧೭, ೪/೧೩, ೪/೧೮, ೬/೩ ಇತ್ಯಾದಿ ಶ್ಲೋಕಗಳ ವಿವರಣೆಯನ್ನು ಗಮನಿಸಬಹುದು. 'ಮಾ ಫಲೇಷು ಕದಾಚನ' ಎಂಬುದಕ್ಕೆ 'ಸ್ವರ್ಗಾದಿ ಇತರ ಕಾಮನೆಗಳು ಬೇಡ' ಎಂದು ಗೀತಾಭಾಷ್ಯದಲ್ಲಿ ಅರ್ಥೈಸಿದ್ದರೆ, ಗೀತಾತಾತ್ಪರ್ಯದಲ್ಲಿ 'ಫಲವನ್ನು ಪಡೆಯುವುದು ನಿನ್ನ ವ್ಯಾಪ್ತಿಗೆ ಸೇರಿದ್ದಲ್ಲ ಅದನ್ನು ಭಗವಂತನೇ ನೀಡಬೇಕು' ಎಂಬುದಾಗಿ ವಿವರಿಸಿರುವರು.

೩) ಗೀತಾಭಾಷ್ಯದಲ್ಲಿ ವಿವರಣೆ ನೀಡದೆ ಅನೇಕ ಶ್ಲೋಕಗಳಿಗೆ ಇಲ್ಲಿ ವಿವರಣೆ ನೀಡಿರುವರು. ಉದಾಹರಣೆಗೆ ೨೦/೪೦, ೪/೧, ೪/೧೩ ಇತ್ಯಾದಿಗಳನ್ನು ಗಮನಿಸಬಹುದು.

೪) ಗೀತೆಯಲ್ಲಿನ ಅನೇಕ ಪದಗಳಿಗೆ ಅದರಲ್ಲೂ ವಿಶೇಷವಾಗಿ ವಿಭೂತಿಯೋಗಪ್ರಸಂಗದಲ್ಲಿ ಬರುವ ಮರೀಚಿ, ಮನಃ ಮೊದಲಾದ ಪ್ರತಿಯೊಂದು ಪದಗಳಿಗೂ ನಿರ್ವಚನ ನೀಡಿರುವರು.

೫) ದೇವತಾತಾರತಮ್ಯ, ವಿಶೇಷ, ಅಭಿಮಾನಿದೇವತೆಗಳು ಮೊದಲಾದ ಅನೇಕ ವಿಷಯಗಳನ್ನು ವಿಶೇಷವಾಗಿ ನಿರೂಪಿಸಿರುವರು.

೬) ಗೀತೆ ಉಪದೇಶಿಸಿದ ಯಾದವ ಕೃಷ್ಣನೇ ವಾಸಿಷ್ಠಕೃಷ್ಣರೂಪದಿಂದ ಅದನ್ನು ಜನತೆಗೆ ಪ್ರಚುರಪಡಿಸಿರುವವನು ಎಂಬ ಮಾತನ್ನು ತಿಳಿಸಿರುವುದು ಇದರ ಮತ್ತೊಂದು ವಿಶೇಷ (೨/೧೨):

''ಏಕಾಂತೇ ಕಥಯನ್ನಪಿ ವ್ಯಾಸರೂಪೇಣ ತದೇವ ಲೋಕೇ ಪ್ರಕಾಶಯಿಷ್ಯತಿ ಹಿ''

ತಾವು ವಾಯುದೇವರ ಅವತಾರ ಎಂಬುದನ್ನು ಗೀತಾಭಾಷ್ಯದ ಕೊನೆಯಲ್ಲಿ ತಿಳಿಸಿರುವಂತೆ ಇದರ ಕೊನೆಯಲ್ಲೂ 'ಯಸ್ಯ ತ್ರೀಣ್ಯುದಿತಾನಿ ವೇದವಚನೇ' ಎಂಬುದಾಗಿಯೇ ತಿಳಿಸಿರುವರು.

ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದ ಮಹತ್ತ್ವವನ್ನು ಸಹ ಅವರು ತಮ್ಮ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯನಿರ್ಣಯಗಳಲ್ಲಿ ಅವತಾರಿಕಾರೂಪವಾಗಿ ನೀಡಿರುವರು :

೩. ಆತ್ಮಸ್ವರೂಪಂ ಜ್ಞಾನಸಾಧನಂ ಚೋಕ್ತಂ ಪೂರ್ವತ್ರ । ಜ್ಞಾನಸಾಧನತ್ವೇನಾಕರ್ಮ ಏನಿಂದ್ಯ ಕರ್ಮ ವಿಧೀಯತ ಉತ್ತರಾಧ್ಯಾಯೇ - ಗೀ. ಭಾ.
ಜ್ಞಾನಂ ಯೋಗಶ್ಚೋಕ್ತೌ । ತತ್ರ ಕರ್ಮಯೋಗಂ ವಿಶೇಷತಃ ಪ್ರಪಂಚಯತ್ಯನೇನಾಧ್ಯಾಯೇನ । -ಗೀ. ತಾ.

೪. ಬುದ್ಧೇಃ ಪರಸ್ಯ ಮಾಹಾತ್ಮ್ಯಂ ಕರ್ಮಭೇದೋ ಜ್ಞಾನಮಾಹಾತ್ಮ್ಯಂ ಚೋಚ್ಯತೇಽಸ್ಮಿನ್ನಧ್ಯಾಯೇ - ಗೀ. ಭಾ.
ಉಕ್ತಯೋರ್ಜ್ಞಾನಕರ್ಮಣೋರುಭಯೋರ್ವಿಶೇಷವಿಸ್ತರಾತ್ಮಕೋಽಯಮಧ್ಯಾಯಃ-ಗೀ. ತಾ.

೫. ತೃತೀಯಾಧ್ಯಾಯೋಕ್ತಮೇವ ಕರ್ಮಯೋಗಂ ಪ್ರಪಂಚಯತ್ಯನೇನಾಧ್ಯಾಯೇನ - 'ಯದೃಚ್ಛಾಲಾಭಸಂತುಷ್ಟಃ' ಇತ್ಯಾದಿ ಸಂನ್ಯಾಸಮ್, 'ಕುರು ಕರ್ಮೈವ' ಇತ್ಯಾದಿ ಕರ್ಮಯೋಗಂ ಚ - ಗೀ. ಭಾ.
ಯೋಗಸಂನ್ಯಾಸಯೋರ್ಲಕ್ಷಣಂ ಸ್ಪಷ್ಟಯತ್ಯನೇನಾಧ್ಯಾಯೇನ । - ಗೀ. ತಾ.

೬. ಜ್ಞಾನಾಂತರಂಗಂ ಸಮಾಧಿಯೋಗಮಾಹಾನೇನಾಧ್ಯಾಯೇನ । - ಗೀ. ಭಾ.
ಧ್ಯಾನಮತ್ರೋಚ್ಯತೇ । - ಗೀ. ತಾ.

೭. ಸಾಧನಂ ಪ್ರಾಧಾನ್ಯೇನೋಕ್ತಮತೀತೈರಧ್ಯಾಯೈಃ । ಉತ್ತರೈಸ್ತು ಷಡ್ಭಿರ್ಭಗವನ್ಮಾಹಾತ್ಮ್ಯಂ ಪ್ರಾಧಾನ್ಯೇನಾಹ । - ಗೀ. ಭಾ.
ಭಗವನ್ಮಹಿಮಾ ವಿಶೇಷತ ಉಚ್ಯತೇ । - ಗೀ. ತಾ.

೮. ಮರಣಕಾಲಕರ್ತವ್ಯಗತ್ಯಾದ್ಯಸ್ಮಿನ್ನಧ್ಯಾಯ ಉಪದಿಶತಿ । - ಗೀ. ಭಾ.
ಉಕ್ತವ್ಯಾಖ್ಯಾನಪೂರ್ವಕಂ ಬ್ರಹ್ಮಪ್ರಾಪ್ತಿರುಚ್ಯತೇ। - ಗೀ. ತಾ.

೯. ಸಪ್ತಮಾಧ್ಯಾಯೋಕ್ತಂ ಸ್ಪಷ್ಟಯತ್ಯಸ್ಮಿನ್ನಧ್ಯಾಯೇ । - ಗೀ. ಭಾ.
ಸಪ್ತಮೋಕ್ತಂ ಪ್ರಪಂಚಯತಿ। - ಗೀ. ತಾ.

೧೦. ಉಪಾಸನಾರ್ಥಂ ವಿಭೂತೀರ್ವಿಶೇಷಕಾರಣತ್ವಂ ಚ ಕೇಷಾಂಚಿದನೇನ ಅಧ್ಯಾಯೇನಾಹ । -ಗೀ. ಭಾ.

೧೧. ಯಥಾ ಶ್ರುತೇ ಧ್ಯಾನಂ ಶಕ್ಯಂ ತಥಾ ಸ್ವರೂಪಸ್ಥಿತಿರನೇನಾಧ್ಯಾಯೇನೋಚ್ಯತೇ । - ಗೀ. ಭಾ.

೧೨. ಅವ್ಯಕ್ತೋಪಾಸನಾದ್ಭಗವದುಪಾಸನಸ್ಯೋತ್ತಮತ್ವಂ ಪ್ರದರ್ಶ್ಯ ತದುಪಾಯಂ ಪ್ರದರ್ಶಯತ್ಯಸ್ಮಿನ್ನಧ್ಯಾಯೇ । - ಗೀ. ಭಾ.
ಸಾಧನನಿರ್ಣಯೋಽತ್ರ। - ಗೀ. ತಾ.

೧೩. ಪೂರ್ವೋಕ್ತಜ್ಞಾನಜ್ಞೇಯಕ್ಷೇತ್ರಪುರುಷಾನ್ ಪಿಂಡೀಕೃತ್ಯ ವಿವಿಚ್ಯ ದರ್ಶಯತ್ಯನೇ-ನಾಧ್ಯಾಯೇನ । - ಗೀ. ಭಾ.
ಸರ್ವಾರ್ಥಸಂಕ್ಷೇಪೋಽಯಮ್। - ಗೀ. ತಾ.

೧೪. ಸಾಧನಂ ಪ್ರಾಧಾನ್ಯೇನೋತ್ತರೈರಧ್ಯಾಯೈರ್ವಕ್ತಿ । - ಗೀ. ಭಾ.
ಕ್ಷೇತ್ರಕ್ಷೇತ್ರಜ್ಞಸಂಯೋಗಸ್ಪಷ್ಟೀಕರಣಪೂರ್ವಕಂ ತ್ರೈಗುಣ್ಯಂ ವಿವಿಚ್ಯ ದರ್ಶಯತಿ । - ಗೀ. ತಾ.

೧೫. ಸಂಸಾರಸ್ವರೂಪತದತ್ಯಯೋಪಾಯವಿಜ್ಞಾನಾನ್ಯಸ್ಮಿನ್ನಧ್ಯಾಯೇ ದರ್ಶಯತಿ । - ಗೀ. ಭಾ.
ತ್ರಯೋದಶೋಕ್ತಂ ವಿವಿಚ್ಯ ದರ್ಶಯತಿ । - ಗೀ. ತಾ.

೧೬. ಪುಮರ್ಥಸಾಧನವಿರೋಧೀನ್ಯನೇನಾಧ್ಯಾಯೇನ ದರ್ಶಯತಿ - ಗೀ. ಭಾ.
ದೇವಾಸುರಲಕ್ಷಣಮ್ । - ಗೀ. ತಾ.

೧೭. ಗುಣಭೇದಾನ್ ಪ್ರಪಂಚಯತ್ಯನೇನಾಧ್ಯಾಯೇನ - ಗೀ. ಭಾ.
ಸದಸತ್ಕರ್ಮವಿವೇಕಃ । - ಗೀ. ತಾ.

೧೮. ಪೂರ್ವೋಕ್ತಂ ಸಾಧನಂ ಸರ್ವಂ ಸಂಕ್ಷಿಪ್ಯೋಪಸಂಹರತ್ಯನೇನಾಧ್ಯಾಯೇನ । - ಗೀ. ಭಾ.
ಸರ್ವಾಧ್ಯಾಯೋಕ್ತಧರ್ಮಸ್ಯ ಸಮಾಸತೋ ನಿರ್ಣಯಾತ್ಮಕೋಽನುಕ್ತತ್ರೈಗುಣ್ಯಾದೀ ಚಾಯಮ್ । - ಗೀ. ತಾ.

ಹೀಗೆ ಭಗವದ್ಗೀತೆಯ ಮೇಲೆ ಎರಡು ಕೃತಿಗಳನ್ನು ನೀಡಿದ ಶ್ರೀಮದಾಚಾರ್ಯರು, ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸಮಗ್ರ ಭಗವದ್ಗೀತೆಯ ಸಾರಾಂಶವನ್ನು ಕೇವಲ ೧೭ ಶ್ಲೋಕಗಳಲ್ಲಿ ತುಂಬಾ ಅಪೂರ್ವರೀತಿಯಲ್ಲಿ ಸಂಗ್ರಹಿಸಿರುವರು :

ತೇ ಸೇನೇ ಸಮರಾರಂಭೇ ಸಮೇತೇ ಸಾಗರೋಪಮೇ ।
ಭೀಮಭೀಷ್ಮಮುಖೇ ವೀಕ್ಷ್ಯ ಪ್ರಾಹ ವಾಸವಿರಚ್ಯುತಮ್ ॥
ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ।
ಇತ್ಯುಕ್ತಃ ಸ ತಥಾ ಚಕ್ರೇ ಪಾರ್ಥೋಽಪಶ್ಯಚ್ಚ ಬಾಂಧವಾನ್ ॥

ವಿಸಸರ್ಜ ಧನುಃ ಪಾಪಾಶಂಕೀ ತತ್ರಾಹ ಮಾಧವಃ ।
ಸ್ವಧರ್ಮೋ ದುಷ್ಟನಿಧನಂ ಧರ್ಮಜ್ಞಾನಾನುಪಾಲನಮ್ ॥
ಕ್ಷತ್ರಿಯಸ್ಯ ತಮುತ್ಸೃಜ್ಯ ನಿಂದಿತೋ ಯಾತ್ಯಧೋ ಧ್ರುವಮ್ ।
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ॥
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।
ನ ಚ ಶೋಕಸ್ತ್ವಯಾ ಕಾರ್ಯೋ ಬಂಧೂನಾಂ ನಿಧನೇಕ್ಷಯಾ ॥
ದೇಹಸ್ಯ ಸರ್ವಥಾ ನಾಶಾದನಾಶಾಚ್ಚೇತನಸ್ಯ ಚ ।
ಸೃಷ್ಟಿಸ್ಥಿತ್ಯಪ್ಯಯಾಜ್ಞಾನಬಂಧಮೋಕ್ಷಪ್ರವೃತ್ತಯಃ ॥
ಪ್ರಕಾಶನಿಯಮೌ ಚೈವ ಬ್ರಹ್ಮೇಶಾದಿಕ್ಷರಸ್ಯ ಚ ।
ಅಕ್ಷರಪ್ರಕೃತೇಶ್ಚೈವ ಮತ್ತ ಏವ ನ ಚಾನ್ಯತಃ ॥
ನ ಮೇ ಕುತಶ್ಚಿತ್ ಸರ್ಗಾದ್ಯಾಃ ಸ್ವಾತಂತ್ರ್ಯಾದ್ಗುಣಪೂರ್ತಿತಃ ।
ಅತಃ ಸಮಾಧಿಕಾಭಾವಾನ್ಮಮ ಮದ್ವಶಮೇವ ಚ ॥
ಜ್ಞಾತ್ವೈಷಾಂ ನಿಧನಾದ್ಯಂ ಚ ಜೀವಾದೇರಸ್ವತಂತ್ರತಾಮ್ ।
ಅಸ್ವಾತಂತ್ರ್ಯಾನ್ನಿವೃತ್ತೌ ಚ ಮಾಮನುಸ್ಮರ ಯುಧ್ಯ ಚ ॥
ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥
ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥
ಸಂಪೂರ್ಣಸತ್ಸರ್ವಗುಣದೇಹೋಽಹಂ ಸರ್ವದಾ ಪ್ರಭುಃ ।
ಅಸ್ಪೃಷ್ಟಾಖಿಲದೋಷೈಕನಿತ್ಯಸತ್ತನುರವ್ಯಯಃ ॥
ಇತ್ಯುಕ್ತೋ ವಾಸವಿಃ ಪ್ರಾಹ ವ್ಯಾಪ್ತಿಂ ತೇ ದರ್ಶಯೇಶ ಮೇ ।
ಅಥ ದಿವ್ಯದೃಶಂ ತಸ್ಯ ದತ್ವಾ ವ್ಯಾಪ್ತಂ ನಿಜಂ ವಪುಃ ॥
ದೇಶತಃ ಕಾಲತಶ್ಚೈವ ಪೂರ್ಣಂ ಸರ್ವಗುಣೈಃ ಸದಾ ।
ದರ್ಶಯಾಮಾಸ ಭಗವಾನ್ ಯಾವತ್ಯರ್ಜುನಯೋಗ್ಯತಾ ॥
ತತ್ಪ್ರಾರ್ಥಿತಃ ಪುನಃ ಕೃಷ್ಣಸ್ತದ್ರೂಪಂ ಲೋಕಮಾನತಃ ।
ಪೂರ್ವವದ್ದರ್ಶಯಾಮಾಸ ಪುನಶ್ಚೈನಮಶಿಕ್ಷಯತ್ ॥
ಜ್ಞಾನಂ ಜ್ಞೇಯಂ ಪ್ರಕೃತ್ಯಾದಿ ಜ್ಞಾಪಯನ್ ಪುರುಷೋತ್ತಮಃ ।
ತೇನಾನುಶಿಷ್ಟಃ ಪಾರ್ಥಸ್ತು ಸಶರಂ ಧನುರಾದದೇ ॥

- ಮಹಾಭಾರತತಾತ್ಪರ್ಯನಿರ್ಣಯ (೨೫/೧-೧೭)

ಗೀತೆಯನ್ನೊಳಗೊಂಡ ಮಹಾಭಾರತಕ್ಕೆ ಮಹಾಭಾರತ ತಾತ್ಪರ್ಯನಿರ್ಣಯವನ್ನು ಮತ್ತು ಮಹಾಭಾರತದಲ್ಲಿನ ಗೀತೆಗೆ ಗೀತಾಭಾಷ್ಯ ಮತ್ತು ತಾತ್ಪರ್ಯಗಳನ್ನು ರಚಿಸಿದ ಏಕಮಾತ್ರ ಆಚಾರ್ಯರು ಶ್ರೀಮಧ್ವಾಚಾರ್ಯರು. ಗೀತೆಯನ್ನು ಉಪದೇಶಿಸಿದ್ದು ಭಗವಂತನು ಎಂಬ ವಿಷಯ ಎಲ್ಲರಿಗೂ ಗೊತ್ತಿತ್ತು. ಆದರೆ ಗೀತೆಯನ್ನು ಲಿಖಿತರೂಪದಲ್ಲಿ ಒದಗಿಸಿದ್ದು ವೇದವ್ಯಾಸರೂಪದಿಂದ ಭಗವಂತನೇ. ಎಂದರೆ ಈ ಅರ್ಥದಲ್ಲೂ ಅದು ಭಗವದ್ಗೀತೆಯೇ ಎಂದು ಪ್ರತಿಪಾದಿಸಿದ್ದು ಶ್ರೀಮದಾಚಾರ್ಯರ ಮತ್ತೊಂದು ವೈಶಿಷ್ಟ್ಯ.

## ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯಗಳ ಟೀಕೆಗಳು

ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಾದ ಶ್ರೀಪದ್ಮನಾಭತೀರ್ಥರು ಗೀತಾಭಾಷ್ಯಕ್ಕೆ 'ಭಾವಪ್ರದೀಪಿಕಾ' ಎಂಬ ವ್ಯಾಖ್ಯಾನವನ್ನೂ, ಗೀತಾತಾತ್ಪರ್ಯಕ್ಕೆ 'ಪ್ರಕಾಶಿಕಾ' ಎಂಬ ವ್ಯಾಖ್ಯಾನವನ್ನೂ ರಚಿಸಿರುವರು. ಮತ್ತೊಬ್ಬ ಸಾಕ್ಷಾಚ್ಛಿಷ್ಯರಾದ ಶ್ರೀನರಹರಿತೀರ್ಥರು ಗೀತಾಭಾಷ್ಯಕ್ಕೆ 'ಭಾವಪ್ರಕಾಶಿಕಾ' ಎಂಬ ವ್ಯಾಖ್ಯಾನ ಬರೆದಿರುವರು[೧]. ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯಗಳಿಗೆ ಶ್ರೀಜಯತೀರ್ಥರು ಕ್ರಮವಾಗಿ 'ಪ್ರಮೇಯದೀಪಿಕಾ ಮತ್ತು ನ್ಯಾಯದೀಪಿಕಾ' ಎಂಬ ಟೀಕೆಗಳನ್ನು ರಚಿಸಿರುವರು. ಶ್ರೀಜಯತೀರ್ಥರ ಈ ಎರಡು ಕೃತಿಗಳ ಮೇಲೂ ಅನೇಕ ಟಿಪ್ಪಣಿಗಳು ರಚಿತವಾಗಿದ್ದು, ಅವುಗಳ ವಿವರ ಹೀಗಿದೆ :

## ಗೀತಾಭಾಷ್ಯಪ್ರಮೇಯದೀಪಿಕಾ ವ್ಯಾಖ್ಯಾನಗಳು

೧) ಶ್ರೀರಘೂತ್ತಮತೀರ್ಥಕೃತ ಭಾವಬೋಧ

೨) ಶ್ರೀವಿಜಯೀಂದ್ರತೀರ್ಥಕೃತಟಿಪ್ಪಣೀ

೩) ಶ್ರೀರಾಘವೇಂದ್ರತೀರ್ಥಕೃತ ಭಾವದೀಪ

೪) ಶ್ರೀಸತ್ಯನಾಥತೀರ್ಥಕೃತಟಿಪ್ಪಣೀ

೫) ಶ್ರೀಸತ್ಯಾಭಿನವತೀರ್ಥಕೃತಟಿಪ್ಪಣೀ

೬) ಗೀತಾಭಾಷ್ಯಭಾವಪ್ರದೀಪಿಕಾ - ಬಿದರಹಳ್ಳಿ ಶ್ರೀನಿವಾಸತೀರ್ಥಕೃತಾ - ಪ್ರಮೇಯದೀಪಿಕೆಗೆ ಬಿದರಹಳ್ಳಿ ಶ್ರೀನಿವಾಸತೀರ್ಥರ ಲಘು ಟಿಪ್ಪಣಿರೂಪವಾದ ಮತ್ತೊಂದು ಕೃತಿಯು ಇತ್ತೀಚಿಗೆ ನನ್ನ ಸಂಗ್ರಹದಲ್ಲಿ ಉಪಲಬ್ಧವಾಗಿದೆ.

೭) ಕೇಶವಾಚಾರ್ಯಪಾಂಡುರಂಗಿಕೃತಟಿಪ್ಪಣೀ (ವ್ಯಾಕರಣಸ್ಪಷ್ಟಪ್ರಮೇಯದೀಪಿಕಾವಾಕ್ಯಾರ್ಥಪ್ರದೀಪ)

೮) ಗೀತಾಭಾಷ್ಯವಿವೃತಿ - ಸಾತಾರಿ ರಾಘವೇಂದ್ರಾಚಾರ್ಯಕೃತ

೯) ಗೀತಾಭಾಷ್ಯಪ್ರಮೇಯದೀಪಿಕಾಭಾವರತ್ನಕೋಶ - ಶ್ರೀಸುಮತೀಂದ್ರತೀರ್ಥಕೃತ

---

೧. ಶ್ರೀ ಪದ್ಮನಾಭತೀರ್ಥರ ಗೀತಾಭಾಷ್ಯಭಾವಪ್ರದೀಪಿಕೆಯು ನಮ್ಮ ಶ್ರೀ ವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನದಿಂದ ಪ್ರಥಮಬಾರಿಗೆ ಪ್ರಕಾಶಿತವಾಗಿದೆ (೨೦೦೭).

೧೦) ಉಮರ್ಜೀ ಪ್ರಹ್ಲಾದಕೃಷ್ಣಾಚಾರ್ಯಕೃತಟಿಪ್ಪಣೀ -
ಪ್ರಮೇಯದೀಪಿಕಾಭಾವಪ್ರಕಾಶ

೧೧) ಶ್ರೀತಾಮ್ರಪರ್ಣೀ ಶ್ರೀನಿವಾಸಾಚಾರ್ಯಕೃತಟಿಪ್ಪಣೀ

೧೨) ಕಟ್ಟೀತಿಮ್ಮಣ್ಣಾಚಾರ್ಯಕೃತಟಿಪ್ಪಣೀ (೫೧೨೫)

೧೩) ವರದಾಚಾರ್ಯಕೃತ ಟಿಪ್ಪಣೀ

೧೪) ವಾಸುದೇವಾಚಾರ್ಯಕೃತಟಿಪ್ಪಣೀ

೧೫) ನೃಸಿಂಹಮೂರ್ತಿಕೃತಟಿಪ್ಪಣೀ(೧೦೫೬)

೧೬) ಗೀತಾಭಾಷ್ಯಬೃಹದ್ಭಾವಬೋಧಿ - ಗೂಢಕರ್ತೃಕ

## ಗೀತಾತಾತ್ಪರ್ಯನ್ಯಾಯದೀಪಿಕಾ ವ್ಯಾಖ್ಯಾನಗಳು

೧) ಶ್ರೀವಿಜಯೀಂದ್ರತೀರ್ಥಕೃತಟಿಪ್ಪಣೀ

೨) ಗೀತಾತಾತ್ಪರ್ಯನ್ಯಾಯದೀಪಿಕಾಭಾವದೀಪ - ಶ್ರೀ ರಾಘವೇಂದ್ರತೀರ್ಥಕೃತ

೩) ಗೀತಾತಾತ್ಪರ್ಯನ್ಯಾಯದೀಪಿಕಾವಾಕ್ಯವಿವೇಕ - ಶ್ರೀಸತ್ಯನಾಥತೀರ್ಥಕೃತ

೪) ಗೀತಾತಾತ್ಪರ್ಯನ್ಯಾಯದೀಪಿಕಾಟಿಪ್ಪಣೀ - ಶ್ರೀಸತ್ಯಪ್ರಜ್ಞತೀರ್ಥಕೃತ

೪) ಯದುಪತ್ಯಾಚಾರ್ಯಕೃತಟಿಪ್ಪಣೀ

೫) ಗೀತಾತಾತ್ಪರ್ಯನ್ಯಾಯದೀಪಿಕಾಟಿಪ್ಪಣೀ - ತಾಮ್ರಪರ್ಣಿ ವಿಠಲಾಚಾರ್ಯಕೃತ

೬) ಗೀತಾತಾತ್ಪರ್ಯನ್ಯಾಯದೀಪಿಕಾಟಿಪ್ಪಣೀ(ಕಿರಣಾವಲಿ)
- ತಾಮ್ರಪರ್ಣಿ ಶ್ರೀನಿವಾಸಾಚಾರ್ಯಕೃತ

೭) ಬಿದರಹಳ್ಳಿ ಶ್ರೀನಿವಾಸತೀರ್ಥಕೃತಟಿಪ್ಪಣೀ

೮) ಗೀತಾತಾತ್ಪರ್ಯನ್ಯಾಯದೀಪಿಕಾಟಿಪ್ಪಣೀ - ವೇದಗರ್ಭ ಪುಟ್ಟಾಚಾರ್ಯಕೃತ

## ಭಗವದ್ಗೀತೆಗೆ ಸಂಬಂಧಿಸಿದ ದ್ವೈತವಾಙ್ಮಯದ ಇತರಗ್ರಂಥಗಳು

೧) ಗೀತಾವಿವೃತಿಃ - ಶ್ರೀವಿದ್ಯಾಧಿರಾಜತೀರ್ಥಕೃತ

೨) ಗೀತಾವಿವೃತಿಃ - ಶ್ರೀವಿಜಯೀಂದ್ರತೀರ್ಥಕೃತ

೩) ಗೀತಾವಿವೃತಿಃ - ಶ್ರೀರಾಘವೇಂದ್ರತೀರ್ಥಕೃತ

೪) ಭಗವದ್ಗೀತಾವಿವರಣ - ಶ್ರೀವಿಶ್ವೇಶ್ವರತೀರ್ಥಕೃತ ( ಪೇಜಾವರ ಮಠ, ಉಡುಪಿ)

೫) ಗೀತಾವ್ಯಾಖ್ಯಾನ - ಶ್ರೀಸತ್ಯಸಂಧತೀರ್ಥಕೃತ

೬) ಗೀತಾಕ್ಷರಾರ್ಥ - ಶ್ರೀಸುಮತೀಂದ್ರತೀರ್ಥಕೃತ

೭) ಗೀತಾಭಾಷ್ಯಾರ್ಥಾನುವಾದ - ಹುಲಿಗಿ ನರಸಪ್ಪಾಚಾರ್ಯಕೃತ

೮) ಗೀತಾಪಂಚಾನನ - ವರಖೇಡಿ ತಿಮ್ಮಣ್ಣಾಚಾರ್ಯಕೃತ

೯) ಗೀತಾವಿವೃತಿವ್ಯಾಖ್ಯಾನ - ಪಾಂಘ್ರಿಆಚಾರ್ಯಕೃತ

೧೦) ಗೀತಾವ್ಯಾಖ್ಯಾನ - ಆಯೀ ನರಹರಿಆಚಾರ್ಯಕೃತ

೧೧) ಗೀತಾವ್ಯಾಖ್ಯಾನ - ಕರವೀರ ಅನಂತಾಚಾರ್ಯಕೃತ

೧೨) ಗೀತಾವ್ಯಾಖ್ಯಾನ - ವನಮಾಲೀಮಿಶ್ರಕೃತ

೧೩) ಗೀತಾವಿವೃತಿ - ಗೂಢಕರ್ತೃಕ

೧೪) ಭಗವದ್ಗೀತೋಪನ್ಯಾಸದರ್ಪಣ - ಶತಾವಧಾನಿ ಲಕ್ಷ್ಮಣಾಚಾರ್ಯಕೃತ

೧೫) ಗೀತಾಭಾವಚಂದ್ರಿಕಾ - ಸಿ.ಎಂ. ಪದ್ಮನಾಭಾಚಾರ್ಯಕೃತ

೧೬) ಮಧ್ವಮತಾನುಸಾರಿ ಗೀತಾವಿವರಣ - ಗೂಢಕರ್ತೃಕ

೧೭) ಗೀತಾಭಾಷ್ಯ - ಗೀತಾತಾತ್ಪರ್ಯ ವಿರೋಧೋದ್ಧಾರಃ - ಗೂಢಕರ್ತೃಕ

೧೮) ಗೀತಾಭಾಷ್ಯವಿರೋಧೋದ್ಧಾರಃ - ಗೂಢಕರ್ತೃಕ

ಶ್ರೀಮದ್ಭಾಗವತದ ಹನ್ನೊಂದನೆಯ ಸ್ಕಂಧದಲ್ಲಿ ಬರುವ ಶ್ರೀಕೃಷ್ಣೋದ್ಧವ-ಸಂವಾದವೂ ಸಹ ಮತ್ತೊಂದು ರೀತಿಯಲ್ಲಿ ಭಗವದ್ಗೀತೆಯೇ ಆಗಿದೆ. ಶ್ರೀಮದಾಚಾರ್ಯರ ಭಾಗವತತಾತ್ಪರ್ಯನಿರ್ಣಯದ ಈ ಭಾಗದ ವಿವರಣೆಯು ಭಗವದ್ಗೀತೆಯ ಮೇಲಿನ ಮತ್ತೊಂದು ವ್ಯಾಖ್ಯಾನದಂತಿದ್ದು, ಅದನ್ನು ಇವುಗಳೊಂದಿಗೆ ಸೇರಿಸಿಕೊಂಡು ಅಧ್ಯಯನ ಮಾಡಿದರೆ ಗೀತೆಯ ಅರ್ಥ ಇನ್ನೂ ಸ್ಫುಟವಾಗುವುದು.

## ಶ್ರೀನರಹರಿ ತೀರ್ಥರು

ಪ್ರಕೃತ ಶ್ರೀಗೀತಾಭಾಷ್ಯಭಾವಪ್ರಕಾಶಿಕೆಯ ಕರ್ತೃಗಳಾದ ಶ್ರೀನರಹರಿತೀರ್ಥರು ಶ್ರೀಮಧ್ವಾಚಾರ್ಯರ ಸಾಕ್ಷಾಚ್ಛಿಷ್ಯರು. ಶ್ರೀಪದ್ಮನಾಭತೀರ್ಥರ ಅನಂತರ ಪೀಠವನ್ನಲಂಕರಿಸಿದ ಮಹಾಯತಿಗಳು[೧].

---

೧. ಶ್ರೀನರಸಿಂಹತೀರ್ಥರು ಮತ್ತು ಶ್ರೀನರಹರಿತೀರ್ಥರು ಎಂಬ ಇಬ್ಬರು ಆಚಾರ್ಯ ಶ್ರೀಮಧ್ವರ ಶಿಷ್ಯರುಗಳನ್ನು ಪರಂಪರೆ ದಾಖಲಿಸಿದೆ. ಇವರಿಬ್ಬರಲ್ಲಿ ಶ್ರೀನರಸಿಂಹತೀರ್ಥರು ಅದಮಾರುಮಠದ ಮೂಲಪುರುಷರು. ಶ್ರೀನರಹರಿತೀರ್ಥರು ಶ್ರೀಪದ್ಮನಾಭತೀರ್ಥರ ಅನಂತರ ಅವರ ಪೀಠವನ್ನೇರಿದವರು.

ಕೆಲವರು ಶ್ರೀಸುಮಧ್ವವಿಜಯ ಭಾವಪ್ರಕಾಶಿಕೆಯ ಮುದ್ರಿತಪ್ರತಿಗಳಲ್ಲಿನ ''ನರಸಿಂಹ ಪದಾಧಾರಾಃ'' ಎಂಬ ಮೂಲವಾಕ್ಯಕ್ಕೆ ನರಹರಿತೀರ್ಥಾಃ ಎಂಬ ಟಿಪ್ಪಣಿಯನ್ನು ಆಧರಿಸಿ, ಇವರಿಬ್ಬರನ್ನೂ ಒಬ್ಬರೇ ಎಂಬುದಾಗಿ ಗುರುತಿಸುತ್ತಾರೆ. ಆದರೆ ಕೆಳಗಿನ ಕಾರಣದಿಂದ ಅವರಿಬ್ಬರೂ ವಿಭಿನ್ನ ವ್ಯಕ್ತಿಗಳು ಎಂದೇ ಹೇಳಬೇಕಾಗುತ್ತದೆ.

೧) ಶ್ರೀನರಸಿಂಹತೀರ್ಥರು ನಿರ್ಯಾಣ ಹೊಂದಿದ ಕಾಲ ಅದಮಾರು ಮಠದ ಕೈಫಿಯತ್ತಿನಂತೆ ಶಾ.ಶ.೧೨೩೨ (ಕ್ರಿ.ಶ. ೧೩೧೦)ಸೌಮ್ಯ ಸಂವತ್ಸರ. ಆದರೆ ಶ್ರೀನರಹರಿತೀರ್ಥರ ನಿರ್ಯಾಣಕಾಲ ಕ್ರಿ.ಶ ೧೩೩೩. ಆದರೆ ಶ್ರೀನರಹರಿತೀರ್ಥರ ನಿರ್ಯಾಣ ಕಾಲ ಶಾ.ಶ. ೧೨೫೫ (ಕ್ರಿ.ಶ. ೧೩೩೩) ಶ್ರೀಮುಖ ಸಂವತ್ಸರ.

೨) ಶ್ರೀನರಸಿಂಹತೀರ್ಥರ ನಿರ್ಯಾಣಸ್ಥಳ ಕೈಫಿಯತ್ತಿನಂತೆ ಭಾಗೀರಥೀತೀರ. ಆದರೆ ಶ್ರೀನರಹರಿತೀರ್ಥರ ನಿರ್ಯಾಣಸ್ಥಳ ಹಂಪೆಯ ತುಂಗಭದ್ರಾತೀರದ ಒಂದು ನಡುಗಡ್ಡೆ.

೩) ಶ್ರೀನರಸಿಂಹತೀರ್ಥರ ನಿರ್ಯಾಣತಿಥಿ ಚೈತ್ರ ಶು. ಪಂಚಮೀ. ಆದರೆ ಶ್ರೀನರಹರಿತೀರ್ಥರ ನಿರ್ಯಾಣತಿಥಿ ಪುಷ್ಯ ಕೃಷ್ಣ ಸಪ್ತಮೀ.

೪) ಅದಮಾರುಮಠದ ಮೂಲಪುರುಷರನ್ನು ಪ್ರಕಟಿತ ಎಲ್ಲ ದಾಖಲೆಗಳಲ್ಲೂ ಶ್ರೀನರಸಿಂಹತೀರ್ಥರೆಂದೇ ಉಲ್ಲೇಖಿಸಲಾಗಿದೆ. ಎಲ್ಲೂ ನರಹರಿತೀರ್ಥರು ಎಂಬ ನಾಮಾಂತರ ಕಂಡುಬರುವುದಿಲ್ಲ. ಅದರಂತೆ

ಶ್ರೀನರಹರಿತೀರ್ಥರ ಹೆಸರನ್ನು ಎಲ್ಲೂ ಶ್ರೀನರಸಿಂಹತೀರ್ಥರೆಂಬ ನಾಮಾಂತರದಿಂದ ಉಲ್ಲೇಖಿಸಿಲ್ಲ.

೧) .....ಮುದಾ ಹೃಷೀಕೇಶನೃಸಿಂಹತೀರ್ಥಯೋಃ - ಸಂಪ್ರದಾಯಪದ್ಧತಿ (ಶ್ಲೋಕ ೧೫)

೨) ನರಸಿಂಹತೀರ್ಥನಾಮ್ನಃ ಆಧಾರಾಶ್ಚೇತಿ ಭಾವಃ ॥

- ಶ್ರೀವೇದಾಂಗತೀರ್ಥರ ಸುಮಧ್ವವಿಜಯ ಟೀಕಾ

೩) ವಂಶಸ್ಥಾದೀನ್ ಸನಕಾದೀನುಪಾಸೇ...... ವಂದೇ ಹೃಷೀಕೇಶಮಥೋ ನೃಸಿಂಹಮ್ ॥

- ಇದು ಅಷ್ಟಮಠದ ಕೈಫಿಯತ್ತುಗಳಲ್ಲಿ ಹಾಗೂ ಉಡುಪಿಯ ಆಹ್ನಿಕಮಂಜರಿಗಳಲ್ಲಿ ಕಂಡು ಬರುವ ಗುರುಪರಂಪರಾಸ್ತುತಿಪರಶ್ಲೋಕ

೪) ಅನೇನ ನರಸಿಂಹತೀರ್ಥಾಖ್ಯಾಃ ಇತ್ಯುಕ್ತಂ ಭವತಿ ॥

- ಛಲಾರೀಆಚಾರ್ಯರ ಸುಮಧ್ವವಿಜಯಟೀಕಾ

೫) 'ಶ್ರೀನರಸಿಂಹತೀರ್ಥಾಚಾರ್ಯರ ವಂಶಾವಳಿ' - ಎಂದೇ ಅದಮಾರು ಮಠದ ಕೈಫಿಯತ್ತಿನಲ್ಲಿದೆ.

೬) ಬುಧಜನಾರ್ಚಿತನೃಸಿಂಹಾರ್ಯರಿಗೆ ಕಾಳಿಯಮರ್ದನನಾದ ಶ್ರೀಕೃಷ್ಣಮೂರ್ತಿ....

- ಶ್ರೀಪ್ರಾಣೇಶದಾಸರ ಕೃತಿ

೫) ಶ್ರೀನರಸಿಂಹತೀರ್ಥರು ಉಡುಪಿಯ ಇತರ ಏಳು ಮಠಗಳ ಮೂಲಪುರುಷರಂತೆ ತೌಳವರೇ ಆಗಿರುವುದು ಸಹಜ. ಆದರೆ, ಶ್ರೀನರಹರಿತೀರ್ಥರು ಕಳಿಂಗ ದೇಶದವರೆಂಬುದು ಸ್ಪಷ್ಟವಾಗಿ ಶಾಸನಗಳ ಆಧಾರದಿಂದ ಸಿದ್ಧಪಟ್ಟಿದೆ.

೬) ಶ್ರೀನರಸಿಂಹತೀರ್ಥರ ಕಾರ್ಯಕ್ಷೇತ್ರವು ಸಹಜವಾಗಿಯೇ ಪಶ್ಚಿಮಕರಾವಳಿಯ ದಕ್ಷಿಣಕನ್ನಡ. ಆದರೆ, ಶ್ರೀನರಹರಿತೀರ್ಥರದು ಶಿಲಾಶಾಸನಗಳಿಂದಲೇ ತಿಳಿಯುವಂತೆ ಪೂರ್ವಕರಾವಳಿಗೆ ಹತ್ತಿರದ ಕಳಿಂಗದೇಶ.

೭) ಶ್ರೀನರಸಿಂಹತೀರ್ಥರು ಅದಮಾರು ಮಠದ ಮೂಲಪುರುಷರಾಗಿದ್ದು, ಅವರು ಶ್ರೀಪದ್ಮನಾಭತೀರ್ಥರ ಅನಂತರದವರಾಗಿ ಅವರ ಪೀಠವನ್ನೇರುವುದರಲ್ಲಿ ಯಾವುದೇ ಔಚಿತ್ಯವೂ ಕಂಡುಬರುವುದಿಲ್ಲ. ಶ್ರೀನರಹರಿತೀರ್ಥರು ಶ್ರೀಮದಾಚಾರ್ಯರ ಆದೇಶದಂತೆ ಶ್ರೀಪದ್ಮನಾಭತೀರ್ಥರ ಅನಂತರವೇ ಪ್ರಥಮಬಾರಿಗೆ ಪೀಠಾಧೀಶರಾಗಿದ್ದಲ್ಲಿ ಯಾವ ಅನೌಚಿತ್ಯವೂ ಇಲ್ಲ.

೮) ಶ್ರೀನರಹರಿತೀರ್ಥರು ಸನ್ಯಾಸಿಗಳಾಗಿದ್ದೇ ರಾಜ್ಯವಾಳಿದ, ಯುದ್ಧವನ್ನೂ ಮಾಡಿದ ಉಲ್ಲೇಖವಿರುವಂತೆ, ಶ್ರೀನರಸಿಂಹತೀರ್ಥರ ಬಗ್ಗೆ ಯಾವುದೇ ಉಲ್ಲೇಖವೂ ಕಂಡುಬರುವುದಿಲ್ಲ.

೯) ಶ್ರೀಅದಮಾರುಮಠದ ಪರಂಪರೆಯಲ್ಲಿ ಶ್ರೀನರಹರಿತೀರ್ಥರ ಆರಾಧನೆಯನ್ನು ಹಂಪಿಯಲ್ಲಿ ಆಚರಿಸಿದ ಯಾವುದೇ ದಾಖಲೆಯೂ ಕಂಡುಬರುವುದಿಲ್ಲ. ಅದರಂತೆ ಶ್ರೀಪದ್ಮನಾಭತೀರ್ಥರ ಪರಂಪರೆಯಲ್ಲಿ ಶ್ರೀನರಸಿಂಹತೀರ್ಥರ ಆರಾಧನೆಯೂ ನಡೆದಿಲ್ಲ.

೧೦) ಉಭಯಪರಂಪರೆಗಳೂ ಅವರಿಬ್ಬರನ್ನು ಒಂದೇ ಎಂಬುದಾಗಿ ಗುರುತಿಸಿದ ಯಾವುದೇ ಪ್ರಾಚೀನದಾಖಲೆಯೂ ಕಂಡುಬಂದಿಲ್ಲ.

೧೧) ಇತ್ತೀಚೆಗೆ ಶ್ರೀನರಹರಿತೀರ್ಥರ ವೃಂದಾವನದ ಮೇಲೆ ದುಷ್ಕರ್ಮಿಗಳು ಆಘಾತವೆಸಗಿದಾಗ, ಅದಮಾರು ಮಠದಿಂದ ಅದರ ಜೀರ್ಣೋದ್ಧಾರಕ್ಕೆ ಯಾವುದೇ ಪ್ರಯತ್ನವೂ ನಡೆದಿಲ್ಲ.

೧೨. ಸುಮಧ್ವವಿಜಯದಿಂದ ತಿಳಿಯುವಂತೆ ಶ್ರೀ ನರಸಿಂಹತೀರ್ಥರು ಆಶ್ರಮಕ್ರಮದಲ್ಲಿ ಶ್ರೀ ಪದ್ಮನಾಭತೀರ್ಥರಿಗಿಂತ ಜ್ಯೇಷ್ಠರು; ಶ್ರೀನರಹರಿತೀರ್ಥರು ಕನಿಷ್ಠರು. ಹತ್ತನೇ ಸರ್ಗದಲ್ಲಿ ಬರುವ ಶ್ರೀ ಉಪೇಂದ್ರ ತೀರ್ಥರ ಉಲ್ಲೇಖದಿಂದ ಇದು ಸ್ಫುಟಪಡುತ್ತದೆ. ಇವರು ಶ್ರೀಪದ್ಮನಾಭತೀರ್ಥರ ಶಿಷ್ಯರಾಗಿ ಪೀಠವೇರುವುದು ಅಸಂಗತವೆನ್ನಿಸುತ್ತದೆ.

೧೩. ಎಲ್ಲಕ್ಕಿಂತ ಹೆಚ್ಚಾಗಿ ಶ್ರೀನರಹರಿತೀರ್ಥರು ತಮ್ಮ ಗೀತಾಭಾಷ್ಯಟೀಕೆ ಮತ್ತು ಯಮಕಭಾರತಟೀಕೆಯ ಪ್ರಾರಂಭದಲ್ಲಿ ಶ್ರೀಪದ್ಮನಾಭತೀರ್ಥರನ್ನು ಗುರುತ್ವೇನ ವಿಶೇಷವಾಗಿ ನಮಸ್ಕರಿಸಿರುವರು. ಅವರು ಸ್ವತಃ ಅದಮಾರು

ಶ್ರೀಮದಾಚಾರ್ಯರಿಂದ ಸನ್ಯಾಸ ಸ್ವೀಕರಿಸಿದ ಇವರ ಪೂರ್ವಾಶ್ರಮದ ಹೆಸರು ಪೂರ್ಣಬೋಧಗುರುವಂಶಕಥಾಕಲ್ಪತರುವಿನಲ್ಲಿ ರಾಮಾಶಾಸ್ತ್ರಿ ಎಂದಿದೆ. ಆದರೆ ಶ್ರೀನರಹರಿಸ್ತುತಿಯಲ್ಲಿ ಶ್ಯಾಮಶಾಸ್ತ್ರಿ ಎಂದಿದೆ. ಒರಿಸ್ಸಾ ಪ್ರಾಂತದ ಇವರು ಶ್ರೀಮಧ್ವಾಚಾರ್ಯರ ವ್ಯಕ್ತಿತ್ವ ಹಾಗೂ ಸಿದ್ಧಾಂತಗಳಿಂದ ಪ್ರಭಾವಿತರಾಗಿ ಶಿಷ್ಯತ್ವ ಸ್ವೀಕರಿಸಿದರು.

ಶ್ರೀನರಹರಿತೀರ್ಥರು ಶ್ರೀಪದ್ಮನಾಭತೀರ್ಥರ ಬಳಿಯಲ್ಲೂ ಸಹ ಅಧ್ಯಯನ ನಡೆಸಿದಂತೆ ಶ್ರೀರಘೂತ್ತಮತೀರ್ಥರ ನ್ಯಾಯವಿವರಣಭಾವಬೋಧದ ಈ ಕೆಳಗಿನ ಮಾತಿನಿಂದ ತಿಳಿದುಬರುತ್ತದೆ:

ಸುಗುಣನರಹರಿಶ್ರೀಮಾಧವಾಕ್ಷೋಭ್ಯರೂಪಾನ್
ಹರಿಭಜನನಿಯುಕ್ತಾನ್ ಶುದ್ಧಧರ್ಮಾರ್ಥಕಾಮಾನ್ ।
ಸುಜನನಿಯಮನಾರ್ಥಂ ಯಃ ಪ್ರಸಾಧ್ಯಾಪರೋಕ್ಷಂ
ಸ ಭವತು ಮಮ ಭೂತ್ಯೈ ಪದ್ಮನಾಭಾಖ್ಯಯೋಗೀ ॥

## ಶ್ರೀಮೂಲಸೀತಾರಾಮದೇವರ ಪ್ರತಿಮೆಗಳು

ಸನ್ಯಾಸ ಸ್ವೀಕಾರದ ಅನಂತರ ಗುರುವರ್ಯರಾದ ಶ್ರೀಮಧ್ವಾಚಾರ್ಯರ ಆದೇಶದಂತೆ ಗಜಪತಿಯ ಕೋಶಾಗಾರದಲ್ಲಿದ್ದ ಶ್ರೀಮೂಲಸೀತಾರಾಮ ಪ್ರತಿಮೆಗಳನ್ನು ತರಲೆಂದು ಕಳಿಂಗದೇಶಕ್ಕೆ ತೆರಳಿದರು. ಆಗ ಅಲ್ಲಿ ಅರಸನ ಅಕಾಲಮರಣದಿಂದಾಗಿ ಅನಾಥವಾಗಿದ್ದ ಕಳಿಂಗರಾಜ್ಯವನ್ನು ಅಲ್ಲಿಯ ಮಂತ್ರಿಮಂಡಲ ಹಾಗೂ ರಾಜ್ಯದ ಪ್ರಧಾನರ ಕೋರಿಕೆಯಂತೆ ಸ್ವೀಕರಿಸಿದರು. ಕ್ರಿ.ಶ. ೧೨೬೪ರಿಂದ ಕ್ರಿ.ಶ. ೧೨೯೪ರ ದೀರ್ಘಕಾಲದ ವರೆಗೆ

---

ಮಠದ ಪೀಠಾಧೀಶರೇ ಆಗಿದ್ದಲ್ಲಿ ಹೀಗೆ ಶ್ರೀಪದ್ಮನಾಭತೀರ್ಥರನ್ನು ಸ್ತುತಿಸುವುದು ಅಷ್ಟಾಗಿ ಸಂಗತವೆನ್ನಿಸುವುದಿಲ್ಲ. ಶ್ರೀನರಹರಿತೀರ್ಥರು ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರೇ ಆಗಿದ್ದರೂ ಪೀಠವನ್ನು ಶ್ರೀಪದ್ಮನಾಭತೀರ್ಥರ ಅನಂತರ ಅಲಂಕರಿಸಿದ್ದರಿಂದ ಅವರನ್ನು ಸ್ತುತಿಸುವುದು ಉಚಿತವೆನ್ನಿಸುತ್ತದೆ.

- ಆದ್ದರಿಂದ ಅವರಿಬ್ಬರನ್ನೂ ಬೇರೆ ಬೇರೆ ವ್ಯಕ್ತಿಗಳು ಎಂದು ಗುರುತಿಸುವುದೇ ಉಚಿತ.

'ನರಸಿಂಹಪದಾಧಾರಾಃ' ಎಂಬುದಕ್ಕೆ ವೇದಾಂಗತೀರ್ಥೀಯವ್ಯಾಖ್ಯಾನದಲ್ಲಿ 'ನರಸಿಂಹತೀರ್ಥನಾಮ್ನಃ ಆಧಾರಾಶ್ಚೇತಿ ಭಾವಃ' ಎಂದೂ, ವಿಶ್ವಪತಿತೀರ್ಥೀಯವ್ಯಾಖ್ಯಾನದಲ್ಲಿ 'ನರಸಿಂಹತೀರ್ಥಾಖ್ಯಾಃ ಇತಿ ಭಾವಃ' ಎಂದೂ, ಛಲಾರೀಯವ್ಯಾಖ್ಯಾನದಲ್ಲಿ 'ಅನೇನ ನರಸಿಂಹತೀರ್ಥಾಖ್ಯಾಃ ಇತ್ಯುಕ್ತಂ ಭವತಿ' ಎಂದೂ ವ್ಯಾಖ್ಯಾನಿಸಲಾಗಿದೆ. 'ನರಹರಿತೀರ್ಥಾಃ' ಎಂಬುದಾಗಿ ಯಾರೂ ವ್ಯಾಖ್ಯಾನಿಸಿಲ್ಲ. ಆದ್ದರಿಂದ ಭಾವಪ್ರಕಾಶಿಕೆಯ ಆ ಪಾಠದ ಬಗ್ಗೆ ಸಂದೇಹ ಹುಟ್ಟುತ್ತದೆ. ಅಲ್ಲದೆ ಅದರ ಕೆಲವು ಹಸ್ತಪ್ರತಿಗಳಲ್ಲಿ 'ನರಸಿಂಹತೀರ್ಥಾಃ' ಎಂದಿದ್ದರೆ, ಮತ್ತೆ ಕೆಲವು ಪ್ರತಿಗಳಲ್ಲಿ 'ನರಹರಿತೀರ್ಥಾಶ್ಚ' ಎಂಬ ಪಾಠಗಳೂ ಉಂಟು. ಹಾಗೆ 'ನರಹರಿತೀರ್ಥಾಃ' ಎಂಬ ಪಾಠವೇ ಭಾವಪ್ರಕಾಶಿಕೆಯಲ್ಲಿದ್ದರೆ, ಅದನ್ನು ಆಧರಿಸಿಯೇ ವ್ಯಾಖ್ಯಾನ ಬರೆದಿರುವ ಶ್ರೀವೇದಾಂಗತೀರ್ಥರು ಮೊದಲಾದವರು ನರಹರಿತೀರ್ಥರೇ ನರಸಿಂಹತೀರ್ಥರು ಎಂದು ಬರೆಯದಿರಲು ಸಾಧ್ಯವಿರುತ್ತಿರಲಿಲ್ಲ. ಆದ್ದರಿಂದ 'ನರಹರಿತೀರ್ಥಾಃ' ಎಂಬುದೇ ಮೂಲಪಾಠವಾದರೂ ಸಹ ಮೇಲೆ ಸೂಚಿಸಿರುವ ಅನುಪಪತ್ತಿಗಳಿಂದಾಗಿ ನರಸಿಂಹತೀರ್ಥರನ್ನೇ ಈ ನರಹರಿತೀರ್ಥರೆಂದು ಭಾವಿಸಲು ಸಾಧ್ಯವಾಗುವುದಿಲ್ಲ ಎಂಬುದನ್ನು ಗಮನಿಸಲೇಬೇಕು.

ಉಪಲಬ್ಧವಿರುವ ಅವರ ಬಗೆಗಿನ ಶಾಸನಗಳು ಅವರ ಕಳಿಂಗದೇಶದ ಸಂಬಂಧ ಹಾಗೂ ಅವರ ಅದರ ಆಧಿಪತ್ಯವನ್ನು ಸ್ಪಷ್ಟಪಡಿಸುತ್ತವೆ. ೧೨ ವರ್ಷಗಳ ಅವಧಿಯವರೆಗಂತೂ ಅವರೇ ರಾಜ್ಯದ ಮುಖ್ಯಅಧ್ಯಕ್ಷರಾಗಿದ್ದರು. ಕೇವಲ ರಾಜ್ಯಪಾಲನೆಯನ್ನು ಮಾತ್ರವಲ್ಲದೆ, ಆಗ ಶತ್ರುಗಳೊಂದಿಗೆ ಒದಗಿದ್ದ ಸಮರವೊಂದನ್ನೂ ಸಹ ಅವರು ಯಶಸ್ವಿಯಾಗಿ ಎದುರಿಸಿ, ಜಯವನ್ನು ಸಾಧಿಸಿದರು. ಅದರ ಸಂಕೇತವಾಗಿ ಶ್ರೀಕೂರ್ಮಂ ಬಳಿಯಲ್ಲಿ ಶ್ರೀಹನೂಮತ್ಸಮೇತ ಸೀತಾರಾಮದೇವರ ಹಾಗೂ ಯೋಗಾನರಸಿಂಹದೇವರ ಮಂದಿರಗಳನ್ನು ಸ್ಥಾಪಿಸಿದರು. ಮಹಾರಾಣಿಯು ತಾವು ಅಧಿಕಾರ ಸ್ವೀಕರಿಸುವ ವೇಳೆಗೆ ಗರ್ಭಿಣಿಯಾಗಿದುದ್ದನ್ನು ಗಮನಿಸಿ ಅವರಿಂದ ಜನಿಸುವ ಮಗು ಪ್ರಾಪ್ತವಯಸ್ಕನಾಗುವವರಿಗೆ ಮಾತ್ರ ತಾವು ರಾಜ್ಯಭಾರವನ್ನು ನಿರ್ವಹಿಸುವ ಸೂಚನೆಯನ್ನು ಆ ಮುನ್ನವೇ ನೀಡಿದ್ದ ಅವರು ಅದರಂತೆ ರಾಜ್ಯವನ್ನು ಮರಳಿಸಿ ಅಲ್ಲಿಂದ ತೆರಳಿದರು. ಆ ಸಮಯದಲ್ಲಿ ಅಲ್ಲಿಯ ಸಮಸ್ತರ ಪ್ರಾರ್ಥನೆಯಂತೆ ಅವರು ಕೃತಜ್ಞತೆಯ ಸಂಕೇತವಾಗಿ ಸಮರ್ಪಿಸಿದ ಆ ಗಜಪತಿಯ ಕೋಶಾಗಾರದಲ್ಲಿದ್ದ ಶ್ರೀಮೂಲಸೀತಾರಾಮರ ಪ್ರತಿಮೆಗಳನ್ನು ಸ್ವೀಕರಿಸಿದರು. ಅದನ್ನು ಉಡುಪಿಗೆ ತೆರಳಿ ಶ್ರೀಮದಾಚಾರ್ಯರಿಗೆ ಸಮರ್ಪಿಸಿ ಕೃತಕೃತ್ಯರಾದರು. ಶ್ರೀಮಧ್ವಾಚಾರ್ಯರ ಅನಂತರ ಅವುಗಳು ಶ್ರೀಪದ್ಮನಾಭತೀರ್ಥರಿಗೂ, ಆ ನಂತರ ಸ್ವತಃ ಶ್ರೀನರಹರಿತೀರ್ಥರಿಗೂ ಲಭಿಸಿದವು. ಶ್ರೀ ಚತುರ್ಮುಖಬ್ರಹ್ಮ ಕರಾರ್ಚಿತವಾದ ಆ ಪ್ರತಿಮೆಗಳನ್ನು ತಂದ ಮಹತ್ಕಾರ್ಯದ ಫಲಶ್ರುತಿ ಎಂಬಂತೆ ಅವುಗಳನ್ನು ಪೂಜಿಸುವ ಮಹಾಸೌಭಾಗ್ಯವೂ ಅವರಿಗೆ ಲಭಿಸಿತು.

ಶ್ರೀನರಹರಿ ತೀರ್ಥರು ಪ್ರಧಾನವಾಗಿ ಶ್ರೀಮೂಲ ಸೀತಾರಾಮ ವಿಗ್ರಹಗಳನ್ನು ತಂದು ಶ್ರೀಮದಾಚಾರ್ಯರಿಗೆ ಸಮರ್ಪಿಸಿದ ಮಹಾಮಹಿಮರೆಂಬುದಾಗಿಯೇ ಪರಂಪರೆಯಲ್ಲಿ ಸ್ತುತ್ಯರಾಗಿದ್ದಾರೆ:

**ಸಸೀತಾ ಮೂಲರಾಮಾರ್ಚಾ ಕೋಶೇ ಗಜಪತೇಃ ಸ್ಥಿತಾ ।**
**ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ ॥**

## ಸಂಚಾರ-ದೇವತಾಪ್ರತಿಷ್ಠೆ

ಶ್ರೀನರಹರಿತೀರ್ಥರು ದಕ್ಷಿಣಭಾರತದಲ್ಲಿ ವ್ಯಾಪಕವಾಗಿ ಸಂಚರಿಸಿದರು. ಇಂದಿನ ಆಂಧ್ರಪ್ರದೇಶದ ಕರ್ನೂಲ್ ಹಾಗೂ ಮೊಳಕಾಲ್ಲೂರು ತಾಲ್ಲೂಕಿನ ಚಿಕ್ಕೇರಹಳ್ಳಿ ಎಂಬಲ್ಲಿ ಅವರಿಂದ ಪ್ರತಿಷ್ಠಾಪಿತವಾದ ವೀರಾಂಜನೇಯ ವಿಗ್ರಹಗಳು ಇಂದಿಗೂ ವೈಭವದಿಂದ ಪೂಜೆಗೊಳ್ಳುತ್ತಿವೆ. ಚಿಕ್ಕೇರಹಳ್ಳಿಯಲ್ಲಿ ಮುಂದೆ ಶ್ರೀಮೋಹನದಾಸರಿಂದ ಶ್ರೀಸೀತಾಲಕ್ಷ್ಮಣ-ಸಮೇತ ಶ್ರೀರಾಮದೇವರ ಪ್ರತಿಷ್ಠೆಯು ನಡೆದು ಅವೆಲ್ಲವುಗಳ ಉತ್ಸವ ಪ್ರತಿವರ್ಷ

ಶ್ರೀರಾಮನವಮಿಯಂದು ವಿಜೃಂಭಣೆಯಿಂದ ನಡೆಯುತ್ತದೆ. ಅದರಂತೆ ಬಳ್ಳಾರಿಜಿಲ್ಲೆಯ ನಾರಾಯಣದೇವರಕೆರೆ ಎಂಬಲ್ಲಿ ಸ್ವಪ್ನಲಬ್ಧವಾದ ಶ್ರೀಭೂಸಮೇತನಾರಾಯಣವಿಗ್ರಹ-ವನ್ನೂ ಶ್ರೀನರಹರಿತೀರ್ಥರು ಪ್ರತಿಷ್ಠಾಪಿಸಿರುವರು. ಇದರ ಉಲ್ಲೇಖ ನಾರಾಯಣದೇವರ-ಕೆರೆಯವರೇ ಆದ ಶ್ರೀದೇವೇಂದ್ರ ಕೃಷ್ಣಾಚಾರ್ಯರಿಂದ ರಚಿತವಾದ ಶ್ರೀನರಹರಿಯತಿ-ಸ್ತೋತ್ರದಲ್ಲಿ ಬಂದಿದೆ:

**ಸಂಚಾರಕಾಲೇ ಪುರಮಾಪ್ಯ ಕಿಂಚಿತ್ ಸ್ವಪ್ನೇ ತಟಾಕಸ್ಥ ಹರಿಂ ಸಮೀಕ್ಷ್ಯ ।**
**ಸಂಸ್ಥಾಪ್ಯ ನಾರಾಯಣ ದೇವ ಪದ್ಮಾಕರಾಭಿಧಾನಂ ನಗರಂ ಚಕಾರ ॥**

ಇದರಿಂದ ನಾರಾಯಣದೇವರಕೆರೆ ಎಂಬ ಹೆಸರಿಗೂ ಇವರು ಕಾರಣರಾದದ್ದು ತಿಳಿಯುತ್ತದೆ. ಈ ನಾರಾಯಣದೇವರಕೆರೆಯು ತುಂಗಭದ್ರಾಅಣೇಕಟ್ಟಿನ ಯೋಜನೆಯಲ್ಲಿ ತುಂಗಭದ್ರೆಯ ಹಿನ್ನೀರಿನಲ್ಲಿ ಮುಳುಗಡೆಯಾದಾಗ, ಅಲ್ಲಿಯ ವಿಗ್ರಹಗಳನ್ನು ಪ್ರಾತಃ ಸ್ಮರಣೀಯರಾದ ಉತ್ತರಾದಿಮಠಾಧೀಶರಾದ ಶ್ರೀಸತ್ಯಪ್ರಮೋದತೀರ್ಥರಿಂದ ಮರಿಯಮ್ಮನಹಳ್ಳಿಯಲ್ಲಿ ಪುನಃಪ್ರತಿಷ್ಠಾಪಿಸಲಾಗಿದೆ (೨೮-೩-೧೯೬೨ - ಫಾಲ್ಗುಣ ಕೃಷ್ಣ ಸಪ್ತಮೀ). ಇಲ್ಲಿಯ ಉತ್ಸವವೂ ಸಹ ಚಿಕ್ಕೇರಹಳ್ಳಿಯಲ್ಲಿ ನಡೆಯುವಂತೆ ಶ್ರೀರಾಮನವಮಿಯಂದೇ ನಡೆಯುವುದು ಗಮನಾರ್ಹ. ಶ್ರೀಮನ್ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೇವತಾ ಪ್ರತಿಷ್ಠಾಪನೆ ಮಾಡಿದವರು ಎಂಬ ವೈಶಿಷ್ಟ್ಯವೂ ಸಹ ಶ್ರೀನರಹರಿತೀರ್ಥರಿಗೆ ಇರುವುದು ಇದರಿಂದ ಸ್ಫುಟಪಡುತ್ತದೆ.

ಶ್ರೀನರಹರಿತೀರ್ಥರು ಆನೆಗೊಂದಿ ಅರಸರೊಂದಿಗೆ ಉತ್ತಮಸಂಬಂಧವನ್ನು ಹೊಂದಿದ್ದು ಮಾರ್ಗದರ್ಶಕರೂ ಆಗಿದ್ದರೆಂದು ತಿಳಿಯುತ್ತದೆ. ಅವರ ಗುರುಗಳಾದ ಶ್ರೀಪದ್ಮನಾಭತೀರ್ಥರೊಂದಿಗೆ ಇವರೂ ಸಹ ವಿಜಯನಗರ ಸಾಮ್ರಾಜ್ಯಸ್ಥಾಪನೆಯಲ್ಲಿ ಪ್ರೇರಕರಾಗಿದ್ದರೆಂದು ಪ್ರತೀತಿ. ಹಂಪೆಯ ವಿಜಯವಿಟ್ಠಲದೇವಸ್ಥಾನದ ಬಳಿಯ ತುಂಗಭದ್ರಾನದಿಯ ನಡುಗಡ್ಡೆಯೊಂದರಲ್ಲಿ ಶ್ರೀನರಹರಿತೀರ್ಥರ ಮೂಲವೃಂದಾವನವು ಕಂಡುಬರುತ್ತಿದ್ದು, ಇದು ಆನೆಗೊಂದಿಯ ಪ್ರಾಂತದ ಮೇಲಿದ್ದ ಅವರ ವಿಶೇಷಪ್ರಭಾವಕ್ಕೆ ನಿದರ್ಶನವಾಗಿದೆ ಎನ್ನಬಹುದು.

ಶ್ರೀನರಹರಿತೀರ್ಥರು ಶ್ರೀಮದಾಚಾರ್ಯರಿಂದಲೇ ಸನ್ಯಾಸ ಸ್ವೀಕರಿಸಿದ್ದ ಶ್ರೀಮಾಧವ-ತೀರ್ಥರಿಗೆ ಪೀಠವನ್ನೊಪ್ಪಿಸಿ, ವೈಕುಂಠಯಾತ್ರೆ ಮಾಡಿದರು. ಶ್ರೀಮಾಧವತೀರ್ಥರ ಅನಂತರ ಪೀಠವನ್ನಲಂಕರಿಸಿದ ಶ್ರೀಅಕ್ಷೋಭ್ಯತೀರ್ಥರ ಶಿಷ್ಯವರೇಣ್ಯರೇ ಮಧ್ವಸಿದ್ಧಾಂತದ ಟೀಕಾಕೃತ್ಪಾದರೆನ್ನಿಸಿದ ಶ್ರೀಜಯತೀರ್ಥರು.

## ಶ್ರೀನರಹರಿತೀರ್ಥಮಠ

ಶ್ರೀನರಹರಿತೀರ್ಥರು ತಮ್ಮ ಗುರುಗಳಾದ ಶ್ರೀಪದ್ಮನಾಭತೀರ್ಥರಂತೆ ವಿಶೇಷತತ್ತ್ವ-ಪ್ರಸಾರಕ್ಕಾಗಿ ತಮ್ಮ ಹೆಸರಿನಲ್ಲಿ 'ಶ್ರೀನರಹರಿತೀರ್ಥಮಠ' ಎಂಬ ಶಾಖಾಮಠವನ್ನು ಸ್ಥಾಪಿಸಿದ್ದ ವಿವರ ಶಾಸನದಿಂದ ಸಿದ್ಧವಾಗುತ್ತದೆ. ಶಾಸನದ ಪೂರ್ಣಪಾಠವನ್ನು ಪರಿಶಿಷ್ಟ-೭ರಲ್ಲಿ ಕೊಡಲಾಗಿದೆ.

ಇದರಲ್ಲಿ ಈ ಶ್ರೀಜಗನ್ನಾಥತೀರ್ಥರನ್ನು ನರಹರಿಮಠದವರು ಎಂದು ಕರೆಯಲಾಗಿದೆ. ಇದು ಶ್ರೀನರಹರಿತೀರ್ಥರು ಶ್ರೀಪದ್ಮನಾಭತೀರ್ಥರಂತೆ ತಾವೂ ಒಂದು ತಮ್ಮದೇ ಹೆಸರಿನ ಶಾಖಾಮಠವೊಂದನ್ನು ಪ್ರವರ್ತಿಸಿದ್ದ ಅಪೂರ್ವವಿಚಾರವನ್ನು ಬೆಳಕಿಗೆ ತರುತ್ತದೆ. ಇವರ ಅನಂತರದ ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರು ಸಹ ತಮ್ಮ ಹೆಸರಿನ ಶಾಖಾಮಠಗಳನ್ನು ಪ್ರವರ್ತಿಸಿದ್ದು ಅವು ಇಂದೂ ನಡೆದುಕೊಂಡು ಬರುತ್ತಿವೆ; ಎಂದರೆ ಶ್ರೀಜಯತೀರ್ಥರಿಗಿಂತ ಮುಂಚೆ ಪೀಠವಾಳಿದ ನಾಲ್ವರು ಯತಿಗಳೂ ಸಹ ತಮ್ಮಹೆಸರಿನಲ್ಲಿ ಮಠಗಳನ್ನು ಸ್ಥಾಪಿಸಿದ್ದರೆಂದಾಗುವುದು.

ಶ್ರೀಜಗನ್ನಾಥತೀರ್ಥರ ಪ್ರಶಿಷ್ಯರಾದ ಶ್ರೀಜಗನ್ನಾಥದಾಸರೆಂಬವರು ಸಮಗ್ರಭಾಗವತ-ವನ್ನು ಒಡಿಸ್ಸಾ ಭಾಷೆಯಲ್ಲಿ ರಚಿಸಿರುವರೆಂದು ಪ್ರತೀತಿ. ಆದರ ಆರಂಭದ ಶ್ಲೋಕಗಳಲ್ಲಿ ಶ್ರೀಮಧ್ವಾಚಾರ್ಯರ ವಂದನೆಯೂ ಕಂಡುಬರುವುದು ಗಮನಾರ್ಹ.

## ಶ್ರೀನರಹರಿತೀರ್ಥರ ಕೃತಿಗಳು

ಶ್ರೀನರಹರಿ ತೀರ್ಥರು ಮಹಾ ತಪಸ್ವಿಗಳೂ, ವಿದ್ವಾಂಸರೂ ಆಗಿದ್ದಂತೆ ಶ್ರೇಷ್ಠ ಗ್ರಂಥಕಾರರೂ ಆಗಿದ್ದಾರೆ. ಪ್ರಸ್ತುತ ಕೃತಿ ಗೀತಾಭಾಷ್ಯಭಾವಪ್ರಕಾಶಿಕೆ ಹಾಗು ಯಮಕಭಾರತ ಟೀಕೆ ಇಂದು ಉಪಲಬ್ಧವಿರುವ ಅವರ ಕೃತಿಗಳು. ಯಮಕಭಾರತಕ್ಕೆ ಶ್ಲೋಕರೂಪ ಹಾಗು ವಾಕ್ಯರೂಪ ಎಂಬುದಾಗಿ ಎರಡು ಬಗೆಯ ಟೀಕೆಗಳನ್ನು ಅವರು ರಚಿಸಿದ್ದು ಅವುಗಳಲ್ಲಿ ಶ್ಲೋಕರೂಪ ಟೀಕೆ ಪ್ರಕಾಶಿತವಾಗಿದೆ. ಅವರು ವಾಕ್ಯರೂಪ ಟೀಕೆಯನ್ನು ರಚಿಸಿರುವ ಉಲ್ಲೇಖ ತಾಮ್ರಪರ್ಣೀ ಶ್ರೀನಿವಾಸಾಚಾರ್ಯರ ವಿರೋಧೋದ್ಧಾರ ಕೃತಿಯಲ್ಲಿ ಬಂದಿದೆ: ಶ್ರೀಮನ್ನರಹರಿತೀರ್ಥಭಟ್ಟಾರಕೈರ್ಯಮಕಭಾರತಟೀಕಾಯಾಂ ಶ್ರೀಕೃಷ್ಣಲೀಲಾ-ಪ್ರಕಾಶಿಕಾಯಾಂ ವಾಕ್ಯರೂಪಾಯಾಮ್ (ಪ್ರಕಾಶಿತ: ಮುಂಬೈಯಿಂದ ಪ್ರಕಾಶಿತವಾದ ಐದು ವ್ಯಾಖ್ಯಾನಗಳ ಸಮೇತವಾದ ಯಮಕಭಾರತ ಕೃತಿಯಲ್ಲಿನ ಗೂಢಕರ್ತೃಕಟೀಕೆಯು ಪ್ರಾಯಃ ಶ್ರೀನರಹರಿತೀರ್ಥರ ಇದೇ ಕೃತಿಯಾಗಿರುವಂತೆ ತಿಳಿಯುತ್ತದೆ).

ವಿರೋಧೋದ್ಧಾರದಲ್ಲಿ ಉಲ್ಲೇಖಿಸಲ್ಪಟ್ಟಿರುವ ವಾಕ್ಯ ಹೀಗಿದೆ - ನ ಚ 'ವಾಸುದೇವೋ

ವಾ ಇದಮಗ್ರ ಆಸಿತ್' ಇತಿ ಶ್ರವಣಾತ್ ಕಥಂ ನಾರಾಯಣಸ್ಯೈವಾವಸ್ಥಾನಮಿತಿಚಾಚ್ಯಮ್ । ತದ್ವಾಕ್ಯಸ್ಯ ನಾರಾಯಣಾಭೇದಾಭಿಪ್ರಾಯೇಣ ಶಕ್ತಿರೂಪಾಭಿಪ್ರಾಯೇಣ ವಾ ಈಶ್ವರಸರ್ಗಪ್ರಸ್ತಾವೇ ವಾಸುದೇವರೂಪಸ್ಯ ಪ್ರಥಮಂ ವ್ಯಕ್ತ್ಯಭಿಪ್ರಾಯೇಣ ವಾ ಪ್ರವೃತ್ತೇಃ। ಅನ್ಯಥಾ 'ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ' ಇತ್ಯಾದಿವಾಕ್ಯಾನಾಂ ನಿರ್ವಿಷಯತ್ವಾಪತ್ತೇಃ ; ಈ ವಾಕ್ಯವು ಸಮಗ್ರವಾಗಿ ಮೇಲೆ ಉಲ್ಲೇಖಿಸಿದ ಮುದ್ರಿತ ವಾಕ್ಯರೂಪಟಿಪ್ಪಣಿಯಲ್ಲಿ ದೊರೆಯುವುದು ಗಮನಾರ್ಹ. ಇದು ಅದನ್ನು ಶ್ರೀನರಹರಿತೀರ್ಥರ ಕೃತಿಯೆಂದು ನಿರ್ಧರಿಸಲು ಇದು ಪೂರಕವಾದ ಸಾಕ್ಷಿ.

ಇವುಗಳಲ್ಲದೆ ಶ್ರೀಮದಾಚಾರ್ಯರ ದಶಪ್ರಕರಣಗಳಿಗೂ ಅವರು ಟೀಕೆ ರಚಿಸಿರುವಂತೆ ಕುಂಭಕೋಣದ ಗೋಪಾಲವಿಲಾಸ ಗ್ರಂಥಸೂಚಿಯಿಂದ ತಿಳಿಯುತ್ತದೆ. ಶ್ರೀ ಜಯತೀರ್ಥರು ತಮ್ಮ ವಿಷ್ಣುತತ್ತ್ವವಿನಿರ್ಣಯ ಟೀಕಾ ಮತ್ತು ಕರ್ಮನಿರ್ಣಯ ಟೀಕೆಗಳಲ್ಲಿ ಪ್ರಸ್ತಾಪಿಸಿರುವ ಟೀಕೆಗಳು ಶ್ರೀ ನರಹರಿತೀರ್ಥರ ಕೃತಿಗಳು ಎಂಬುದಾಗಿ ಶ್ರೀ ರಾಘವೇಂದ್ರಸ್ವಾಮಿಗಳ ಮತ್ತು ಶ್ರೀಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿಗಳಿಂದ ತಿಳಿಯುತ್ತದೆ. ಅವುಗಳ ಹಸ್ತಪ್ರತಿಗಳು ಉಪಲಬ್ಧವಾಗಿಲ್ಲ. ಶ್ರೀನರಹರಿತೀರ್ಥರು ನರಹರಿ, ರಘುಪತಿ, ರಘುಕುಲತಿಲಕ ಮೊದಲಾದ ಅಂಕಿತಗಳಿಂದ ಕೆಲವು ಕನ್ನಡ ಕೃತಿಗಳನ್ನು ರಚಿಸಿದ್ದು ಅವುಗಳನ್ನು ಹರಿದಾಸ ಸಾಹಿತ್ಯದ ಆದಿ ಕೃತಿಗಳು ಎಂದು ಭಾವಿಸುವುದುಂಟು. ಅವುಗಳಲ್ಲಿ ಕೆಲವನ್ನು ಪರಿಶಿಷ್ಟ - ೨ ರಲ್ಲಿ ಕೊಡಲಾಗಿದೆ.

## ಶ್ರೀನರಹರಿತೀರ್ಥರ ಗೀತಾಭಾಷ್ಯಭಾವಪ್ರಕಾಶಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಗೀತಾಭಾಷ್ಯದ ಮೇಲೆ ಇಂದು ಉಪಲಬ್ಧವಿರುವ ಟೀಕೆಗಳು ಮೂರು. ಮೊದಲನೆಯದು ಶ್ರೀಪದ್ಮನಾಭತೀರ್ಥ ಶ್ರೀಮಚ್ಚರಣರ ಭಾವಪ್ರದೀಪಿಕಾ. ಎರಡನೆಯದು ಶ್ರೀನರಹರಿತೀರ್ಥಭಟ್ಟಾರಕರ ಭಾವ-ಪ್ರಕಾಶಿಕಾ. ಇವೆರಡೂ ಪ್ರಾಚೀನಟೀಕೆಗಳೆಂದೇ ಪ್ರಸಿದ್ಧ. ಮೂರನೆಯದು ಟೀಕಾಕಾರರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥಭಿಕ್ಷುಗಳ ಪ್ರಮೇಯದೀಪಿಕಾ. ಪ್ರಸ್ತುತ ಶ್ರೀನರಹರಿತೀರ್ಥರ ಭಾವಪ್ರಕಾಶಿಕೆಯ ಮಹತ್ತ್ವ ಹಾಗೂ ವೈಶಿಷ್ಟ್ಯಗಳನ್ನು ಈ ಕೆಳಗಿನಂತೆ ಸಂಗ್ರಹಿಸಬಹುದು.

೧. ಆರಂಭದಲ್ಲಿ ನಾಲ್ಕು ಪದ್ಯಗಳ ಮಂಗಳಾಚರಣೆ. ಮೊದಲ ಪದ್ಯದಲ್ಲಿ ಭಗವದ್ಗೀತೆಯ ಪ್ರತಿಪಾದ್ಯ ದೇವತೆಯಾದ ಶ್ರೀಮನ್ನಾರಾಯಣನನ್ನು ನಮಸ್ಕರಿಸುತ್ತಾರೆ. ಗೀತಾಭಾಷ್ಯದ ಆದಿಶ್ಲೋಕವಾದ 'ದೇವಂ ನಾರಾಯಣಂ ನತ್ವಾ' ಎಂಬಲ್ಲಿನ ದೇವಶಬ್ದದ ವ್ಯಾಖ್ಯಾನರೂಪ ಇಲ್ಲಿನ 'ದೇವೋಽಪಿ ದ್ಯೋತನಾದ್ಯಃ' ಎಂಬ ಮೊದಲಪದ್ಯ. ಎರಡನೆಯ ಪದ್ಯದಲ್ಲಿ ಭಗವದ್ಗೀತೆಯ ಪ್ರಾಮಾಣ್ಯವನ್ನು ಸ್ಥಾಪಿಸಲು ಆದಕ್ಕೆ ಪ್ರಯೋಜಕವಾದ ಪ್ರಸಂಗಾನುಕೂಲ್ಯ, ವಕ್ತ್ರಾನುಕೂಲ್ಯ ಮತ್ತು ಶ್ರೋತ್ರಾನುಕೂಲ್ಯಗಳನ್ನು

ಸೂಚಿಸುವಂತೆ ಮಹಾಭಾರತದ ಕರ್ತೃಗಳಾದ ವೇದವ್ಯಾಸರನ್ನು ನಮಸ್ಕರಿಸುತ್ತಾರೆ. ಆ ಪದ್ಯದಲ್ಲಿ ವೇದವ್ಯಾಸಾವತಾರದ ಹಿನ್ನೆಲೆ, ವೇದವ್ಯಾಸರೂಪದ ಹಿರಿಮೆ ಹಾಗೂ ಅವರ ಶಿಷ್ಯವರ್ಗವನ್ನು ತಿಳಿಸಿದ್ದಾರೆ. ಹಾಗೆಯೇ ಭಾಷ್ಯದ ಪ್ರಾಮಾಣ್ಯವನ್ನೂ ಸ್ಥಾಪಿಸಲು ಶ್ರೀಮದಾಚಾರ್ಯರನ್ನು ಮೂರನೆಯ ಪದ್ಯದಲ್ಲಿ ನಮಸ್ಕರಿಸುತ್ತಾರೆ. ನಾಲ್ಕನೆಯ ಪದ್ಯದಲ್ಲಿ ಭಾಷ್ಯದ ಪರಂಪರೆಯನ್ನು ಬೆಳಸಿದ ಗೀತಾಭಾಷ್ಯದ ಮೊದಲ ಟೀಕಾಕಾರರಾದ ತಮ್ಮ ವಿದ್ಯಾಗುರುಗಳಾದ ಶ್ರೀಮದಾಚಾರ್ಯರ ಪ್ರಿಯಶಿಷ್ಯರಾದ ಶ್ರೀಪದ್ಮನಾಭತೀರ್ಥಶ್ರೀಮಚ್ಚರಣರನ್ನು ನಮಸ್ಕರಿಸುತ್ತಾರೆ.

೨. ''ಶ್ರೀಮದಾಚಾರ್ಯರ ವಾಕ್ಯಗಳು ಸ್ವತಃ ಪ್ರಮಾಣ. ಅವುಗಳ ಪ್ರಾಮಾಣ್ಯವನ್ನು ಸ್ಥಾಪಿಸಲು ಮತ್ತೊಂದು ಪ್ರಮಾಣವಚನದ ಅವಶ್ಯಕತೆ ಇಲ್ಲ. ಆದರೂ ಆಚಾರ್ಯರ ಲಕ್ಷಣವನ್ನು ಅರಿಯದ ಮಂದಮತಿಗಳಿಗೆ ಸಂಶಯ ಬಾರದಿರಲೆಂದು ಪ್ರಮಾಣಗಳನ್ನು ಉಲ್ಲೇಖಿಸುತ್ತಾರೆ.'' ಎಂದು ಆರಂಭದಲ್ಲೇ ತಿಳಿಸುತ್ತಾ, ವಸ್ತುನಿಷ್ಠ ಹಾಗೂ ಅಪಾರ ಗುರುಭಕ್ತಿಯನ್ನು ಪ್ರದರ್ಶಿಸಿದ್ದಾರೆ:

ಯದೇತತ್ ಭಾರತಸ್ಯ ಪ್ರಮಾಣತಮತ್ವಪ್ರತಿಪಾದಕಂ ನಷ್ಟಧರ್ಮೇತ್ಯಾದಿ ಶ್ರೀಮದಾಚಾರ್ಯ-ವಚನಂ ತತ್ಸ್ವತ ಏವ ಪ್ರಮಾಣಂ, ನ ತತ್ರ ಶಂಕಾ ಭವತಿ ತಲ್ಲಕ್ಷಣಾಭಿಜ್ಞಾನಾಂ ಮಹಾತ್ಮನಾಮ್ । ತಥಾಹಿ ಬ್ರಹ್ಮತರ್ಕಾದೌ 'ಯದುಕ್ತಿಮಾತ್ರೇ ಪ್ರಾಮಾಣ್ಯಂ ಯದಿ ನಾಸ್ಯಾಗಮಾಂತರಮ್ । ಅಪೇಕ್ಷಿತಮ್' ಇತ್ಯಾರಭ್ಯ 'ನಾಶಂಕ್ಯಂ ತದ್ವಚಃ ಕ್ವಚಿತ್' 'ತದ್ವಾಕ್ಯಂ ದೇವಪೂಜಿತಮ್' ಇತ್ಯಾದಿ ತಲ್ಲಕ್ಷಣಾನಭಿಜ್ಞಾನಾಂ ಪ್ರಾಕೃತಾನಾಂ ತು ಭವತ್ಯಪಿ ಶಂಕಾ । ಸಾऽಪಿ ಮಾ ಭೂದಿತಿ ಭಾವೇನಾಹ - ತಚ್ಚೋಕ್ತಮಿತಿ ॥

ಶ್ರೀನರಹರಿತೀರ್ಥರ ಈ ಮಾತುಗಳಿಗೆ ಸಂವಾದಿಯಾಗಿ ಶ್ರೀತ್ರಿವಿಕ್ರಮಪಂಡಿತಾಚಾರ್ಯ 'ತತ್ತ್ವಪ್ರದೀಪ' ಕೃತಿಯಲ್ಲಿನ ಈ ಕೆಳಗಿನ ಮಾತುಗಳನ್ನು ಗಮನಿಸಬಹುದು:

ಯದ್ವ್ಯಾಖ್ಯಾಚಾರ್ಯಃ ಸ್ವೋಕ್ತಾರ್ಥೇ ಸ್ವಯಮೇವ ಪ್ರಮಾಣಮ್ । ಸರ್ವಜ್ಞತ್ವಾದವಿಪ್ರಲಂಭ-ಕತ್ವಾಚ್ಚ। ತಥಾಪಿ ಸ್ಕಾಂದೇ ಚೋಕ್ತಮಿತಿ ಪ್ರೌಢವಾದಂ ಕರೋತಿ । ಸರ್ವಜ್ಞತ್ವಂ ತಾವಚ್ಛ್ರುತಿಸಿದ್ಧಮ್ । ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮಿತಿ । .... ಪ್ರತ್ಯಕ್ಷಮೇವ ಚೈತಲ್ಲಕ್ಷಣಂ ದೃಶ್ಯತೇ ಭಗವತಿ ಭಾಷ್ಯಕಾರೇ । .... ತಸ್ಮಾದಯಮಾಚಾರ್ಯ ಆಪ್ತತಮ ಇತಿ ಸಿದ್ಧಮ್ । ಯದುಕ್ತಯಃ ಕ್ವಾಪಿ ನಾನ್ಯಥಾ ದೃಶ್ಯಂತೇ ತತ್ರಾಪ್ತಿಂ ಶಂಕಮಾನಾಃ ಕುತ್ರ ನಿಶ್ಚಿನ್ವೀರನ್ ಇತಿ ।

- ತತ್ತ್ವಪ್ರದೀಪಿಕಾ (ಪತ್ರ ೧೬, ೧೭, ೧೯)

೩. ಅಲ್ಲಲ್ಲಿ ಮೂಲಗ್ರಂಥಗಳನ್ನು, ಆಚಾರ್ಯರ ಇತರ ಗ್ರಂಥಗಳನ್ನು ಉಲ್ಲೇಖಿಸಿ ವಿಷಯದ ಸಮಗ್ರತೆಯನ್ನು ತಿಳಿಸಿರುವರು:

ಏತದೇವ ಋಗ್ಭಾಷ್ಯೇ ಮುನಿಸ್ತು ಸರ್ವವಿದ್ಯಾನಾಮಿತ್ಯಾದಿನಾ । (ಉಪೋದ್ಘಾತ); ತದುಕ್ತಂ ಮಾತ್ಸ್ಯೇ (ಉಪೋದ್ಘಾತ); ತಥಾ ಹಿ ಕಾಠಕೋಪನಿಷದ್ಭಾಷ್ಯೇ (೨/೨೦); ಶ್ರೀಮದನುವ್ಯಾಖ್ಯಾನೇ

(೨/೫೦); ತಥಾ ಹಿ ಮೋಕ್ಷಧರ್ಮೇ ಯಾಜ್ಞವಲ್ಕ್ಯವಚನಂ (೩/೧೫); ಸ್ವಾಭಿಮತಂ ಚಕ್ರಂ ಭಗವಾನ್ನಾರದೀಯೇ ಪ್ರಕಟಮಾಹ (೩/೧೫); ತಥಾ ಹ್ಯುತ್ತರಪ್ರಸ್ಥಾನೇ (೪/೧); ಇತಿ ಹ್ಯನ್ಯತ್ರ (೪/೬); ವತ್ಸಶ್ರುತೌ (೪/೧೫); ತಥಾ ಹಿ ಮೋಕ್ಷಧರ್ಮೇ (೪/೨೧); ತದುಕ್ತಂ ಶ್ರೀ ಭಾಗವತೇ (೭/೨೪)

೪. ಆಚಾರ್ಯರ ಇತರ ಗ್ರಂಥದಿಂದೊದಗಬಹುದಾದ ವಿರೋಧವನ್ನೂ ಪರಿಹರಿಸಿರುವರು. ಉದಾಹರಣೆಗೆ 'ತನುರ್ವಿದ್ಯಾ ಕ್ರಿಯಾಕೃತಿಃ' ಎಂಬ ಭಾಗವತದ ವಾಕ್ಯವನ್ನು ಭಾಗವತತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ವ್ಯಾಖ್ಯಾನಿಸಿದ ರೀತಿ ಗೀತಾಭಾಷ್ಯದಲ್ಲಿ ಉಲ್ಲೇಖಿಸಿದ ರೀತಿಗೆ ಭಿನ್ನವಾಗಿ ತೋರಿದರೂ ವಿರುದ್ಧವಲ್ಲ ಎಂಬುದನ್ನು 'ಕ್ರಿಯಾಕೃತಿಃ ಇತ್ಯಸ್ಯ ಶೃಂಗಾರಾದ್ಯಾಕೃತಿಗತಃ ಕ್ರಿಯಾತ್ಮಾ ಪಾಕಶಾಸನಃ ಇತಿ ವ್ಯಾಖ್ಯಾನೇಽಪ್ಯಂಗದೇವತಾಧರ್ಮಾಣಾಂ ಭಗವದ್ಗತತ್ವಸ್ಯ ಸಮಾಹಾರಸೂತ್ರಸಿದ್ಧತ್ವಾದತ್ರೋದಾಹರಣಮ್ ।'(೨/೨೪) ಎಂದು ಪ್ರತಿಪಾದಿಸಿರುವರು. ಹಾಗೆಯೇ 'ಆನಂದಾದಯಃ ಪ್ರಧಾನಸ್ಯ' ಎಂಬ ಸೂತ್ರದಿಂದ ಹೇಗೆ ಭಗವಂತನನ್ನು ಅವ್ಯಕ್ತಕ್ಕಿಂತಲೂ ಉತ್ತಮನು ಎಂದು ತಿಳಿಯಬೇಕು ಎಂಬುದರ ಸಮನ್ವಯವನ್ನು ಅವ್ಯಕ್ತಾತ್ ಪರತ್ವಮಪ್ಯಾನಂದಾದಿಚತುಷ್ಟಯಾಂತರ್ಭೂತಮೇವ'(೩/೪೨) ಎಂಬಲ್ಲಿ ತಿಳಿಸಿರುವರು.

೫. ಭಾಷ್ಯದ 'ಚ' 'ಇತಿ' 'ಹಿ' ಮೊದಲಾದ ಸಕಲಶಬ್ದಗಳೂ ಸಾರ್ಥಕ ಎಂಬುದರ ಸಮರ್ಥನೆಯನ್ನೂ ಅಲ್ಲಲ್ಲಿ ಕಾಣಬಹುದು. 'ಚಶಬ್ದಾತ್ ಮನುಷ್ಯಫಲಾನ್ಯೇವ ಕಾನಿಚಿತ್ಕರ್ಮಾಣಿ' (೩/೪); 'ಚಶಬ್ದಾತ್ ಕಾಮೋಽಪಿ ನೋಚ್ಯತೇ' (೩/೪೨); 'ಇತಿಶಬ್ದೋ ಹೇತ್ವರ್ಥಃ' (೪/೧೪); 'ಹೀತಿ ಶ್ರುತ್ಯಾದಿಸರ್ವಪ್ರಮಾಣಪ್ರಸಿದ್ಧಮಿತ್ಯರ್ಥಃ' (೭/೧೪).

೬. ಮಹಾಭಾರತದ ಮೋಕ್ಷಧರ್ಮದ ವಚನಗಳನ್ನು ಭಾಷ್ಯಕಾರರು ಉಲ್ಲೇಖಿಸಿದಾಗ ಆ ಪ್ರಕರಣದ ಸುಮಾರು ೨೦ ಶ್ಲೋಕಗಳ ಪೂರ್ಣಪಾಠವನ್ನು ಉಲ್ಲೇಖಿಸಿ ಸಮಗ್ರವ್ಯಾಖ್ಯಾನವನ್ನು ನೀಡಿರುವುದು ಇಡೀ ಟೀಕೆಯಲ್ಲೇ ಅತ್ಯಂತ ಪ್ರಮುಖವಾದ ಅಂಶ. (೨/೫೦)

೭. ಭಾಷ್ಯಕಾರರು ವ್ಯಾಖ್ಯಾನಿಸದ ಗೀತೆಯ ಪದಗಳನ್ನು ಕೆಲವೆಡೆ ವ್ಯಾಖ್ಯಾನಿಸಿ ಭಾಷ್ಯಕಾರರು ವ್ಯಾಖ್ಯಾನಿಸದಿದ್ದಕ್ಕೆ ಕಾರಣವನ್ನು ನೀಡಿರುವರು. 'ಪ್ರಥಮಾಧ್ಯಾಯಸ್ಯ ಕತಿಪಯಶ್ಲೋಕಾಧಿಕಸ್ಯಾತಿರೋಹಿತಾರ್ಥತ್ವಾತ್' (೨/೧೦); 'ಹಿಶಬ್ದೇನ ಪ್ರಸಿದ್ಧಮೇತ-ದಜಾಮಿಲಾದೌ ಇತಿ ಸೂಚಿತಮ್ । ನೋದಾಹರಣಂ ಭಾಷ್ಯೇ' (೨/೬೦); 'ಏತದಪಿ ಗಂಗಾದ್ವಾರಾದೌ ಯತಮಾನೇ ಅಜಾಮಿಳಾದೌ ಪ್ರಸಿದ್ಧಮಿತಿ ಹಿಶಬ್ದಸೂಚಿತತ್ವಾತ್ ನಾತ್ರಾಪ್ಯುದಾಹರಣಂ ಭಾಷ್ಯೇ' (೨/೬೧); 'ಯದಲಿಪ್ತತ್ವಜ್ಞಾನ್ಯಪಿ ಕರ್ಮಲೇಪಾತ್

ಮುಚ್ಯತೇ, ನ ತಂ ಕರ್ಮಾಣಿ ಲಿಂಪಂತೀತಿ ಕಿಮು ವರ್ಣನೀಯಮಿತಿ ವ್ಯಾಖ್ಯಾನಮವಿಸ್ಪಷ್ಟತ್ವಾನ್ನ ಕೃತಮ್' (೪/೧೪).

೮. ಅಲ್ಲಲ್ಲಿ ಗೀತೆಗೆ ನೇರವಾಗಿ ವ್ಯಾಖ್ಯಾನಿಸಿ ಕೆಲವೆಡೆ 'ಇತಿ ಶ್ಲೋಕಾರ್ಥಃ' ಎಂದೂ ತಿಳಿಸಿರುವುದು ಮುಂದಿನ ಗೀತಾವಿವೃತಿಗಳ ಪರಂಪರೆಗೇ ನಾಂದಿಯೆನ್ನಬಹುದು. 'ಅಸ್ಮಿನ್ ಪಕ್ಷೇ ಗತಾಸೂನ್ ಇತ್ಯತ್ರಾಪಿ ಗತಾಸವೋ ದೇಹಾನ್ನಿರ್ಗತಾ ಅಸವ ಯೇಭ್ಯ ಇತಿ ಕೃತ್ವಾ ಗತಾಸವೋ ಜೀವಾಃ' (೨/೧೨); 'ಅನೇನೈವಂ ವಿಧಃ ಶ್ಲೋಕಾನ್ವಯಃ ಸೂಚ್ಯತೇ' (೩/೩)'; 'ಏವಮೇಷ ಶ್ಲೋಕತ್ರಯಾರ್ಥಃ ಸಂಗ್ರಹೇಣಾವಗಂತವ್ಯಃ' (೫/೮-೧೦); ಇತಿ ಶ್ಲೋಕದ್ವಯಾರ್ಥಃ (೫/೧೪-೧೫); 'ತಥಾ ಹಿ ಶ್ಲೋಕಾರ್ಥಃ' (೬/೧)

೯. ಶ್ರೀನರಹರಿತೀರ್ಥರು ಶಾಂಕರಭಾಷ್ಯ, ರಾಮನುಜಭಾಷ್ಯ ಹಾಗು ಭಾಸ್ಕರಭಾಷ್ಯಗಳನ್ನು ಉಲ್ಲೇಖಿಸಿ ಅವುಗಳನ್ನು ಸೋಪಪತ್ತಿಕವಾಗಿ ನಿರಾಕರಿಸಿರುವರು[೧]. 'ಯದಪವ್ಯಾಖ್ಯಾನಂ' (೪/೩೦), 'ಕಶ್ಚಿದೇವಮಾಹ.... ಅನ್ಯಸ್ತ್ವನ್ಯಥಾ' (೫/೧೦); 'ಮಾಯಿನಾऽತ್ರ' (೭/೧೩). ಈ ಮೊದಲಾದ ಹಲವಾರು ಅಪವ್ಯಾಖ್ಯಾನಗಳ ನಿರಾಕರಣೆಯ ಸ್ಥಳಗಳಲ್ಲಿ ಸೂಕ್ತವಾದ ಪರಭಾಷ್ಯಗಳನ್ನು ಅಡಿಟಿಪ್ಪಣಿಗಳಲ್ಲಿ ಕಾಣಬಹುದು. ಉಳಿದ ಭಾಷ್ಯಕಾರರು ನೀಡಿರುವ ಪ್ರಮಾಣವಿರುದ್ಧವಾದ ವ್ಯಾಖ್ಯಾನಗಳಿಗೆ 'ಮಾಯೀ ತು ಭಗವನ್ಮಹಿಮಾನಮಸಹಮಾನಃ' (೨/೨೪); 'ಜೀವಪರಭೇದಮಸಹಮಾನಾಃ' (೩/೩೮); 'ಅನಂತವಿಶೇಷಾನ್ ಭಗವತ್ಯಸಹಮಾನೇನ ಮಾಯಿನಾ' (೭/೨) ಎಂಬುದಾಗಿ ಭಗವದ್ದ್ವೇಷವೇ ಮೂಲಕಾರಣ ಎಂದು ತಿಳಿಸಿರುವುದು ಗಮನಾರ್ಹ.

೧೦. 'ಏತೇನೈತದಪಿ ನಿರಸ್ತಮ್' ಎಂಬ ಪರಿಪಾಠದಲ್ಲಿ ಭಾಷ್ಯದ ವಿಶ್ವತೋಮುಖತ್ವವನ್ನು ಪ್ರತಿಪಾದಿಸಿರುವುದನ್ನೂ ಗಮನಿಸಬಹುದು. (೩/೩೦); (೪/೨೫); (೭/೫).

೧೧. ಕೆಲವೆಡೆ ಸವಿಸ್ತಾರವಾಗಿ ಬೇರೆಯ ವಿಷಯಗಳನ್ನು ಪ್ರಸ್ತಾಪಿಸಿ ತಮ್ಮ ವಿಚಾರವನ್ನು ಸಮರ್ಥಿಸಿ, ಅಥವಾ ಭಾಷ್ಯದಲ್ಲಿ ನೇರವಾಗಿ ಪ್ರಸ್ತುತವಲ್ಲದ ಅನ್ಯರವ್ಯಾಖ್ಯಾನಗಳನ್ನು ಉಲ್ಲೇಖಿಸಿ ಅವುಗಳನ್ನು ತಾವೇ ನಿರಾಕರಿಸಿ ಕೊನೆಗೆ ಇತರರ ಅಸಾಮಂಜಸ್ಯವನ್ನು ತೋರಿಸಲು 'ಇತ್ಯೇಷಾ ದಿಕ್' ಎಂಬ ಮಾತುಗಳನ್ನು ಗಮನಿಸಬಹುದು. (೪/೨೫); (೬/೨೦); (೭/೧೪).

೧೨. 'ಸ್ವಪದಾನಿ ಚ ವರ್ಣ್ಯಂತೇ' ಎಂಬ ಭಾಷ್ಯದ ಲಕ್ಷಣವನ್ನು ಸಮನ್ವಯಿಸಲೇನೋ

---

೧. ಅಂತಹ ಕೆಲವು ಉಲ್ಲೇಖಗಳನ್ನು ಡಾ|| ಬಿ.ಎನ್.ಕೆ. ಶರ್ಮರವರು History of Dvaita Vedanta and its literature ಗ್ರಂಥದಲ್ಲಿ ನೀಡಿದ್ದಾರೆ.

ಎಂಬಂತೆ 'ಸ್ವಪದಂ ವಿವೃಣೋತಿ'(೫/೨೩) ಎಂಬ ಮಾತುಗಳು ಭಾಷ್ಯವ್ಯಾಖ್ಯಾತೃಗಳಿಗೆ ದಾರಿದೀಪ.

೧೩. 'ಉಕ್ತಂ ಚ' ಎಂದಾಗ ಯುಕ್ತ್ಯಾದಿಗಳಿಂದ ಸಿದ್ಧವಾದುದರ ಜೊತೆಗೆ ಆಗಮದಿಂದಲೂ ಸಿದ್ಧವಾಗಿದೆ ಎಂಬರ್ಥವೂ (೬/೩೦, ೭/೧), 'ತಚ್ಚೋಕ್ತಮ್' ಎಂದಾಗ ಪ್ರಸ್ತುತ ವಿಷಯದ ಜೊತೆಗೆ ಮತ್ತೊಂದೂ ಹೇಳಲ್ಪಡುತ್ತಿದೆ ಎಂಬರ್ಥವೂ (೬/೮) ಮೊದಲಾದವು ಸ್ಫುಟವಾದರೂ, ಅದನ್ನೂ ಸೂಚಿಸುವ ಮೂಲಕ ಒಂದೆಡೆ ಬಾಲಬೋಧವಾದರೆ; ಮತ್ತೊಂದೆಡೆ ಸೂಕ್ಷ್ಮವಾಗಿ ಅರ್ಥೈಸುವುದಕ್ಕೆ ಮಾರ್ಗದರ್ಶಕ-ವಾಗಿದೆ.

೧೪. ಭಾಗವತ, ಗೀತಾತಾತ್ಪರ್ಯ, ಆಥರ್ವಣಭಾಷ್ಯ, ನ್ಯಾಯವಿವರಣ, ಬ್ರಹ್ಮಸೂತ್ರಭಾಷ್ಯ, ಭಾಗವತತಾತ್ಪರ್ಯ ಮೊದಲಾದವುಗಳಲ್ಲಿನ ಅನೇಕ ಪ್ರಮಾಣ-ವಚನಗಳನ್ನು ಮನಸ್ಸಿನಲ್ಲಿಟ್ಟುಕೊಂಡು ವ್ಯಾಖ್ಯಾನಿಸಿರುವುದನ್ನೂ ಗಮನಿಸಬಹುದು. ನಮಗೆ ಗುರುತಿಸ ಬಹುದಾದವುಗಳನ್ನು ಅಡಿಟಿಪ್ಪಣಿಯಲ್ಲಿ ನೀಡಲಾಗಿದೆ. ಉದಾಹರಣೆಗೆ ಈ ಭಾಷ್ಯ ವಾಕ್ಯಗಳನ್ನು ಗಮನಿಸಬಹುದು. 'ಕಥಮನ್ಯಥಾ ಭಾರತನಿರುಕ್ತಿಜ್ಞಾನೇನ ಸರ್ವಪಾಪಕ್ಷಯಃ' (ಉಪೋದ್ಘಾತ) 'ದೇಹಿನ ಜ್ಞಾನ ಏತದ್ಭವತಿ' (೨/೧೩), 'ಪ್ರಾಮಾಣ್ಯಂ ಚ ಪ್ರತ್ಯಕ್ಷಾದಿವತ್' (೨/೧೩), 'ಮೇಘಚಕ್ರಾಭಿಮಾನೀ ಚ ಪರ್ಜನ್ಯಃ' (೩/೧೫), 'ಸಾಮ್ಯಂ ಪ್ರಕಾರಾಂತರೇಣ ವ್ಯಾಚಷ್ಟೇ' (೬/೩೨).

೧೫. ಯಜ್ಞಪ್ರತಿಪಾದ್ಯದೇವತೆಯು ಯಜ್ಞಾಂಗವೆಂದಾದರೆ ದೇವತೆಗಿಂತ ಯಜ್ಞವೇ ಮುಖ್ಯವೆಂದಾಗಲಿಲ್ಲವೇ? ಎಂಬೀ ಮೊದಲಾದ ಪ್ರಶ್ನೆಗಳಿಗೂ ಗೀತಾಭಾಷ್ಯವೇ ಉತ್ತರಿಸಿರುವ ಪರಿಯನ್ನು ಭಾವಪ್ರಕಾಶಿಕೆಯಿಂದಲೇ ತಿಳಿಯಬೇಕು. ''ಏತೇನೈತದಪಿ ಪ್ರತ್ಯುಕ್ತಮ್ । ಯದಾಹುರನ್ಯೇ 'ಉದ್ದೇಶ್ಯದೇವತಾನಾಂ ಯಾಗಾರ್ಥತ್ವಾತ್ ತದಂಗತ್ವಮ್' ಇತಿ । ಯಾಗಾದೇರಪಿ ತದಧೀನತ್ವಾದಿತಿ ಭಾವಃ ।'' (೨/೨೪)

೧೬. ಕೆಲವೆಡೆ ಭಾಷ್ಯಕಾರರು ಉಲ್ಲೇಖಿಸಿದ ಶ್ರುತಿಗಳ ಪೂರ್ಣಪಾಠವನ್ನು ಉಲ್ಲೇಖಿಸಿ ಶಬ್ದಾರ್ಥವನ್ನು ತಿಳಿಸಿದ್ದಾರೆ. (೩/೪, ೪/೮, ೪/೧೪, ೪/೨೫, ೫/೨, ೭/೬)

೧೭. 'ಪ್ರಾಮಾಣ್ಯಂ ಚ ಪ್ರತ್ಯಕ್ಷಾದಿವತ್' ಎಂಬಲ್ಲಿ ಆದಿಶಬ್ದಾರ್ಥ, 'ಇತರತ್ರಾಪಿ ಸಾಮ್ಯಾತ್' ಎಂಬಲ್ಲಿ ಇತರಶಬ್ದಾರ್ಥ, ಅಮೋಘದರ್ಶನಃ ಎಂಬ ಪದಚ್ಛೇದ(೨/೭೨) ಕುಂಭಕಶಬ್ದನಿರ್ವಚನ (೫/೨೭), 'ಆತ್ಮಾಧಿಕಾರೇ' (೮/೧) ಎಂದರೆ ಹಿಂದಿನ ಅಧ್ಯಾಯದಲ್ಲಿ ಪ್ರಸ್ತುತವಾದ ಆತ್ಮಪ್ರಕರಣ ಈ ಮೊದಲಾದ ಅರ್ಥಗಳು ಭಾವಪ್ರಕಾಶಿಕೆಯಿಂದ ಮಾತ್ರವೇ ತಿಳಿಯಲು ಶಕ್ಯ.

೧೮. 'ಭೇದಶ್ರುತೇಶ್ಚ' (೭/೧೨) ಎಂಬ ಭಾಷ್ಯವಾಕ್ಯವನ್ನು ಏಕವಾಕ್ಯವಿವಕ್ಷೆಯಿಂದ ಶ್ರೀಪದ್ಮನಾಭತೀರ್ಥರು ಮತ್ತು ಶ್ರೀಜಯತೀರ್ಥರು ವ್ಯಾಖ್ಯಾನಿಸಿದ್ದರೆ, ಅದನ್ನು ಭಿನ್ನವಾಕ್ಯವಾಗಿ ಅನ್ವಯಿಸಿ ಭಾವಪ್ರಕಾಶಿಕೆಯಲ್ಲಿ ವ್ಯಾಖ್ಯಾನಿಸಲಾಗಿದೆ. ಮೂರೂ ಟೀಕೆಗಳು ಅನೇಕ ಸಂದರ್ಭಗಳಲ್ಲಿ ವಿಭಿನ್ನ ಶೈಲಿಯಿಂದ ಭಾಷ್ಯವನ್ನು ವ್ಯಾಖ್ಯಾನಿಸಿರುವುದನ್ನು ಅಡಿಟಿಪ್ಪಣಿಗಳಲ್ಲಿ ಗಮನಿಸಬಹುದು. ಉದಾಹರಣೆಗೆ 'ಆತ್ಮಮಾಯಯಾ'(೪/೬) ಎಂಬ ಭಾಷ್ಯವಾಕ್ಯವನ್ನು ಗಮನಿಸಿ.

೧೯. ಈ ಟೀಕೆಯು ಪ್ರಾಯಶಃ ಶ್ರೀಪದ್ಮನಾಭತೀರ್ಥರ ಭಾವಪ್ರದೀಪಿಕೆಯ ಛಾಯೆಯಲ್ಲೇ ರೂಪುಗೊಂಡಿರುವುದನ್ನು ನಮ್ಮ ಪ್ರಕಾಶನದ ಭಾವಪ್ರದೀಪಿಕೆಯ ಅಡಿಟಿಪ್ಪಣಿಗಳಲ್ಲಿ ಗಮನಿಸಬಹುದು. ಮೂಲರಾಮಾಯಣದ ಕರ್ತೃ ಹಯಗ್ರೀವ ಎಂಬುದಕ್ಕೆ ಮತ್ಸ್ಯಪುರಾಣದ ಉಲ್ಲೇಖ (ಉಪೋದ್ಘಾತ), ಭಗವಂತ ಸೂರ್ಯನಿಗೆ ಉಪದೇಶಿಸಿದ್ದು ದಕ್ಷನ ಮೂಲಕ ಎಂಬುದಕ್ಕೆ ಮೋಕ್ಷಧರ್ಮದ ಆಧಾರ(೪/೧), 'ದುಷ್ಪೂರೇಣಾನಲೇನ ಚ'(೩/೩೯) ಎಂಬ ಗೀತಾವಾಕ್ಯದ ವಿವರಣೆಯ ಸಂದರ್ಭದಲ್ಲಿ 'ಹಿರಣ್ಯಕಾದಿವಿಷಯಮೇತತ್' ಎಂಬ ಶ್ರೀಪದ್ಮನಾಭತೀರ್ಥರ ಮಾತನ್ನು ವಿವರಿಸಿದಂತಿರುವುದು, ಕಾಮಕ್ರೋಧಾದಿಗಳಿಲ್ಲದೇ ಚೈತನ್ಯವಿರಲಾರದು ಎಂಬ ವ್ಯಾಖ್ಯಾನ, ಸ್ವಾತಂತ್ರ್ಯಬುದ್ಧಿಯಿಂದ ಮಾಡಿದ ಕಾರ್ಯದಂತೆ ರಾಗಾದಿಗಳಿಂದ ಮಾಡಿದ ಧರ್ಮವೂ ದೋಷಪ್ರದ ಎಂಬ ಸ್ಮೃತಿಯ ಉದಾಹರಣೆ ಮೊದಲಾದವು ಇದಕ್ಕೆ ಸಾಕ್ಷಿ.

ಈ ಗ್ರಂಥದಲ್ಲೂ ಸೂಕ್ತಸ್ಥಳಗಳಲ್ಲಿ ಈ ಅಡಿಟಿಪ್ಪಣಿಗಳನ್ನು ನೀಡಲಾಗಿದೆ.

೨೦. ಶ್ರೀಜಯತೀರ್ಥರು ಎರಡು ಸ್ಥಳಗಳಲ್ಲಿ (ಕೇಚಿತ್ ೨/೧೬, ಅಪರೇ ತು ೨/೫೦) ಶ್ರೀನರಹರಿತೀರ್ಥರ ವ್ಯಾಖ್ಯಾನವನ್ನು ಉಲ್ಲೇಖಿಸಿರುವರು. ಅಲ್ಲದೇ ಅನೇಕ ಸ್ಥಳಗಳಲ್ಲಿ ಶ್ರೀನರಹರಿತೀರ್ಥರ ವ್ಯಾಖ್ಯಾನದಿಂದ ಪ್ರಭಾವಿತರಾಗಿಯೇ ತಮ್ಮ ಟೀಕೆಯನ್ನು ರಚಿಸಿರುವುದು ಮೇಲ್ನೋಟಕ್ಕೆ ತಿಳಿಯುತ್ತದೆ. ಅಂತಹ ಉಪಜೀವ್ಯ ಉಪಜೀವಕಭಾವವನ್ನು ಪ್ರಸ್ತುತ ಸಂಪಾದನೆಯ ಅಡಿಟಿಪ್ಪಣಿಯಲ್ಲಿ ಉದ್ದಕ್ಕೂ ನೋಡಬಹುದಾಗಿದೆ. ಉದಾಹರಣೆಗೆ 'ಯಾ ತ್ವಾಶಾ' (೩/೧೫), 'ಉತ್ತಮಶ್ಲೋಕವಿಕ್ರಮೈಃ' (೩/೧೭) ಎಂಬ ಮಾತುಗಳನ್ನು ಗಮನಿಸಬಹುದು.

ಶ್ರೀನರಹರಿತೀರ್ಥರ ವ್ಯಾಖ್ಯಾನಗಳನ್ನು ಶ್ರೀಜಯತೀರ್ಥರು ನಿರಾಕರಿಸಿದ್ದಾರೆ ಎಂಬ ಕೆಲವರ ಅಭಿಪ್ರಾಯ ಸಾಧುವೆನ್ನಿಸುವುದಿಲ್ಲ. (೨/೧೬)ರ ಅಪಿಶಬ್ದದ ಅನ್ವಯದ ಬಗೆಗಿನ ಭಿನ್ನಾಭಿಪ್ರಾಯವು ಸರ್ವಥಾ ನರಹರಿತೀರ್ಥರನ್ನು ವಿರೋಧಿಸುವ ದೃಷ್ಟಿಯನ್ನು ಹೊಂದಿಲ್ಲ. ಶ್ರೀಪದ್ಮನಾಭತೀರ್ಥರ ವ್ಯಾಖ್ಯಾನವನ್ನು ಅನುಸರಿಸಿರುವ ಈ ಭಾವಪ್ರಕಾಶಿಕೆಯನ್ನು ಶ್ರೀಜಯತೀರ್ಥರು ವಿರೋಧಿಸಿದರೆ ಅದು ಪದ್ಮನಾಭತೀರ್ಥರ ವಿರೋಧವೇ

ಆಗುವುದಿಲ್ಲವೇ!! ನ್ಯಾಯಸುಧೆಯಲ್ಲಿ ಸನ್ನ್ಯಾಯರತ್ನಾವಲಿಯನ್ನು ಉದಾಹರಿಸಿ ಅಭಿಪ್ರಾಯ ಭೇದವೆಂದು ಕಂಡಾಗ ಪ್ರಾಚೀನಟೀಕಾಕಾರರದ್ದು ಅಭ್ಯುಪಗಮವಾದ ಎಂದು ಸಮನ್ವಯಿಸಿದ ಶ್ರೀಟೀಕಾಕೃತ್ಪಾದರು ಇಲ್ಲಿ ಅವರನ್ನು ನಿರಾಕರಿಸುತ್ತಾರೆ ಎಂದು ಸರ್ವಥಾ ಒಪ್ಪಲಾಗದು. ಅಲ್ಲದೆ ಶ್ರೀಜಯತೀರ್ಥರ ಸಾಕ್ಷಾಚ್ಛಿಷ್ಯರಾದ ಶ್ರೀವಿದ್ಯಾಧಿರಾಜತೀರ್ಥಶ್ರೀಚರಣರು ಮೇಲೆ ಉಲ್ಲೇಖಿಸಿದ ಗೀತಾವಾಕ್ಯವನ್ನು ವ್ಯಾಖ್ಯಾನಿಸುತ್ತಾ ಅಪಿಶಬ್ದಕ್ಕೆ ಪ್ರಾಚೀನಟೀಕಾಕಾರರ ಅನ್ವಯವನ್ನೇ ತಮ್ಮ ಗೀತಾವಿವೃತಿಯಲ್ಲಿ ಅಳವಡಿಸಿಕೊಂಡಿರುವುದು ತಮ್ಮ ಗುರುಗಳಿಗೆ ಎಂದೂ ಪ್ರಾಚೀನರ ವಿರೋಧದ ಅಭಿಪ್ರಾಯವಿರಲಿಲ್ಲ ಎಂದು ಸ್ಪಷ್ಟಪಡಿಸಿದಂತಿದೆ.

(೫/೨)ರ 'ನಾಯಂ ಸನ್ನ್ಯಾಸಃ ಯತ್ಯಾಶ್ರಮಃ' ಎಂಬ ಭಾಷ್ಯವಾಕ್ಯಕ್ಕೆ ಪ್ರಶ್ನೆ ಮತ್ತು ಪರಿಹಾರಗಳಲ್ಲಿನ ಸನ್ನ್ಯಾಸಶಬ್ದ ಎಂದು ಶ್ರೀನರಹರಿತೀರ್ಥರು ವ್ಯಾಖ್ಯಾನಿಸಿದ್ದು, ಶ್ರೀಜಯತೀರ್ಥರು ಇದು ಕೇವಲ ಪರಿಹಾರವಾಕ್ಯಕ್ಕೆ ಸಂಬಂಧಿಸಿದೆ ಪ್ರಶ್ನೆಗಲ್ಲ ಎಂದು ವ್ಯಾಖ್ಯಾನಿಸಿರುವುದು ಪರಸ್ಪರ ವಿರೋಧದಂತೆ ತೋರುತ್ತದೆ. ಆದರೆ ಪ್ರಶ್ನೆಯ ವಾಕ್ಯದಲ್ಲಿ ಸನ್ನ್ಯಾಸಶಬ್ದಕ್ಕೆ ಯತ್ಯಾಶ್ರಮ ಎಂಬ ಅರ್ಥದ ಜೊತೆಗೆ ಮತ್ತೊಂದು ಅರ್ಥವೂ ಅಭಿಪ್ರೇತ ಎಂದು ತಿಳಿಸುವುದು ಪ್ರಾಚೀನಟೀಕೆಯ ಉದ್ದೇಶ. ಯತ್ಯಾಶ್ರಮವೆಂಬ ಅರ್ಥವನ್ನು ನಿರಾಕರಿಸದಿರುವುದು ಟೀಕಾಕೃತ್ಪಾದರ ಉದ್ದೇಶ ಎಂದು ತಿಳಿದರೆ ಯಾವ ವಿರೋಧಕ್ಕೂ ಅವಕಾಶವಿಲ್ಲ.

೨೧. ಶ್ರೀವಿದ್ಯಾಧಿರಾಜತೀರ್ಥರು ತಮ್ಮ ಗೀತಾವಿವೃತಿಯಲ್ಲಿ ಕೆಲವೆಡೆ (೨/೧೫, ೨/೧೬, ೨/೨೧, ೩/೧೩, ೪/೬, ೪/೧೪, ೪/೨೧, ೪/೨೩, ೪/೩೩, ೫/೧೧, ೫/೧೩, ೫/೧೪, ೫/೧೭, ೬/೨೧, ಇತ್ಯಾದಿ) ವ್ಯಾಖ್ಯಾನಿಸಿರುವ ರೀತಿಯು ಕೇವಲ ನರಹರಿತೀರ್ಥರ ವ್ಯಾಖ್ಯಾನದಲ್ಲಿ ಮಾತ್ರ ಕಾಣಸಿಗುತ್ತದೆ. ಇವನ್ನು ಪ್ರಸ್ತುತ ಸಂಪಾದನೆಯ ಅಡಿಟಿಪ್ಪಣಿಗಳಲ್ಲಿ ಗಮನಿಸಬಹುದು.

೨೨. ಶ್ರೀರಾಘವೇಂದ್ರತೀರ್ಥರು ತಮ್ಮ 'ಗೀತಾರ್ಥಸಂಗ್ರಹ'ದಲ್ಲಿ ನರಹರಿತೀರ್ಥೀಯೇ (೨/೧೫), ನರಹರಿತೀರ್ಥಾಸ್ತು (೨/೧೬) ಎಂದು ಉಲ್ಲೇಖಿಸಿದ್ದಾರೆ.

೨೩. ಉಪೋದ್ಘಾತದ 'ಸರ್ವವೇದಾದ್ಯರ್ಥೋಪಬೃಂಹಿತಾಮ್' ಎಂಬ ಭಾಷ್ಯವಾಕ್ಯದಲ್ಲಿ ಆದಿಶಬ್ದದಿಂದ ಪುರಾಣಗಳನ್ನು ಗ್ರಹಿಸಬೇಕು ಎಂದು ವ್ಯಾಖ್ಯಾನಿಸಿ ಅದಕ್ಕೆ ಆಧಾರವಾಗಿ ಮತ್ಸ್ಯಪುರಾಣದ ವಾಕ್ಯವೊಂದನ್ನು ಶ್ರೀನರಹರಿತೀರ್ಥರು ನೀಡಿದ್ದಾರೆ. ಶ್ರೀತಾಮ್ರಪರ್ಣೀ ಆಚಾರ್ಯರ ಪ್ರಮೇಯದೀಪಿಕಾ ಟಿಪ್ಪಣಿಯಲ್ಲಿ ಶ್ರೀನರಹರಿತೀರ್ಥರು

ಉಲ್ಲೇಖಿಸಿದ ಈ ವಾಕ್ಯವನ್ನು 'ನರಹರಿತೀರ್ಥೀಯೇ' ಎಂದು ಉದಾಹರಿಸಲಾಗಿದೆ.

೨೪. ಭಾವರತ್ನಕೋಶವೆಂಬ ಅನುಪಮಸಂಶೋಧನಾತ್ಮಕ ಟಿಪ್ಪಣಿಯನ್ನು ಬರೆದ ಖ್ಯಾತ ಯಶರಾದ ಶ್ರೀರಾಘವೇಂದ್ರತೀರ್ಥರ ಪರಂಪರೆಯ ಶ್ರೀಸುಮತೀಂದ್ರತೀರ್ಥರು ಸುಮಾರು ನೂರಕ್ಕೂ ಅಧಿಕಸ್ಥಳಗಳಲ್ಲಿ ಭಾವಪ್ರಕಾಶಿಕೆಯನ್ನು 'ಇತಿ ಪ್ರಾಚೀನಟೀಕಾ' ಎಂದು ಉಲ್ಲೇಖಿಸಿರುವರು. ಜೊತೆಗೆ ಶ್ರೀನರಹರಿತೀರ್ಥರ ಟೀಕೆಗೂ ಹಾಗೂ ಶ್ರೀಜಯತೀರ್ಥರ ಟೀಕೆಗೂ ಇರುವ ಸಂಬಂಧವನ್ನು ಭಾವರತ್ನಕೋಶಕಾರರು ಅದ್ಭುತವಾಗಿ ತಿಳಿಸಿದ್ದಾರೆ. ಅವೆಲ್ಲವುಗಳನ್ನೂ ಅಡಿಟಿಪ್ಪಣಿಗಳಲ್ಲಿ ಕಾಣಬಹುದು.

ಹೀಗೆ ಹಲವಾರು ದೃಷ್ಟಿಯಿಂದ ಶ್ರೀನರಹರಿತೀರ್ಥರ ಈ ಟೀಕೆಯು ಅಪೂರ್ವವೂ ಅಮೂಲ್ಯವೂ ಆಗಿದೆ.

೨೫. ಉಪಲಬ್ಧವಿರುವ ಈ ಕೃತಿಯ ಎಲ್ಲ ಪ್ರತಿಗಳು ಇಲ್ಲಿ ಮುದ್ರಿತವಾಗಿರುವ ಭಾಗಕ್ಕೆ ಕೊನೆಗೊಳ್ಳುವುದು ಸೋಜಿಗದ ಸಂಗತಿ. ಅದರಂತೆ ಶ್ರೀ ಸುಮತೀಂದ್ರತೀರ್ಥರ ಭಾವರತ್ನಕೋಶದಲ್ಲಿನ ಉಲ್ಲೇಖಗಳು ನಂತರದ ಭಾಗಕ್ಕೆ ಕಂಡುಬರುವುದಿಲ್ಲ ಎಂಬುದು ವಿಶೇಷ. ಇದರಿಂದ ಇದಕ್ಕೆ ಮೂಲಕೃತಿಯೇ ಅಸಮಗ್ರವಾಗಿರುವುದು ಅಥವಾ ಅನಂತರದವರಿಗೆ ಅದರ ಸಮಗ್ರಭಾಗ ದೊರೆಯದಿರುವುದು ಕಾರಣವಾಗಿರಬಹುದು. ಇದರ ಬಗ್ಗೆ ಹೆಚ್ಚಿನ ಸಂಶೋಧನೆ ಅಗತ್ಯ.

## ಪ್ರಕೃತಸಂಪಾದನೆಯ ಬಗ್ಗೆ

ಶ್ರೀನರಹರಿತೀರ್ಥರ ಗೀತಾಭಾಷ್ಯಭಾವಪ್ರಕಾಶಿಕೆಯು ಇದೇ ಮೊದಲಬಾರಿಗೆ ಈ ಮೂಲಕ ಪ್ರಕಾಶಿತವಾಗುತ್ತಿದೆ. ನನ್ನ ಸಂಗ್ರಹದಲ್ಲಿರುವ (''ಶ್ರೀಜಯತೀರ್ಥಸಂಸ್ಕೃತಹಸ್ತ-ಲಿಖಿತಗ್ರಂಥಾಲಯ, ವ್ಯಾಸನಕೆರೆ'') ನಾಲ್ಕು ಹಸ್ತಪ್ರತಿಗಳ ಆಧಾರಮೇಲೆ ಈ ಗ್ರಂಥವನ್ನು ಸಂಪಾದಿಸಲಾಗಿದೆ. ಎರಡು ಹಸ್ತಪ್ರತಿಗಳು ''ಗಾರ್ಹಸ್ಥ್ಯ'' ಎಂಬ ಕೊನೆಯ ಪದದೊಂದಿಗೆ ಮುಕ್ತಾಯವಾಗಿದ್ದು, ಇನ್ನೆರಡು ಹಸ್ತಪ್ರತಿಗಳು ಇನ್ನೂ ಮೊದಲೇ ಕೊನೆಗೊಂಡಿವೆ. ನಮಗೆ ತಿಳಿದಿರುವಂತೆ ಇನ್ನಾವ ಪ್ರತಿಯೂ ಎಂಟನೆಯ ಅಧ್ಯಾಯದ ನಾಲ್ಕನೆಯ ಶ್ಲೋಕದ ಮುಂದುವರೆದ ಭಾಗದ ಟೀಕೆಯನ್ನು ಒಳಗೊಂಡಿಲ್ಲ. ಶ್ರೀಸುಮತೀಂದ್ರತೀರ್ಥರೂ ತಮ್ಮ ಭಾವರತ್ನಕೋಶದಲ್ಲಿ ಮುಂದೆಲ್ಲೂ ಪ್ರಾಚೀನಟೀಕೆಯನ್ನು ಉದಾಹರಿಸಿಲ್ಲ ಎಂಬುದೂ ಇದಕ್ಕೆ ಪೂರಕ. ಶ್ಲೋಕವೊಂದನ್ನು ಉದಾಹರಿಸುತ್ತಾ ಪಾದಾರ್ಧದಲ್ಲಿ ಹಸ್ತಪ್ರತಿಯು ಕೊನೆಗೊಳ್ಳುವುದರಿಂದ ಅತಿಕಡಿಮೆಯೆಂದರೂ ಇನ್ನೂ ಕೆಲವು ಪಂಕ್ತಿಗಳು ಇತ್ತೀಚಿನ ಪ್ರತಿಗೈಯ್ಯುವ ಕಾಲದಲ್ಲಿ ಲುಪ್ತವಾಗಿವೆ ಎನಿಸುತ್ತದೆ.

